# ಕೊರವಂಜಿ

*Koravanji*

ಸೆಪ್ಟೆಂಬರ್
೧೯೫೭



ಸಂಪಾದಕರು :
ಶ್ರೀ॥ ರಾ. ಶಿ.

ಬರಹಗಾರರು :

ಶ್ರೀಮತಿ॥ ಲೀಲಾ
ಶ್ರೀ॥ ರಾಮಿ
ಶ್ರೀ॥ ಸವ್ಯಸಾಚಿ
ಶ್ರೀ॥ "ಕೇಫ"
ಶ್ರೀ॥ ಗುಡಿಗ
ಶ್ರೀ॥ ಬಚ್ಚ
ಶ್ರೀ॥ ಅ. ರಾ. ಸೇ.
ಶ್ರೀ॥ ಪಾಟಾಳಿ
ಶ್ರೀ॥ ಕುಮಾರು
ಶ್ರೀ ಪ್ರಸಾದ್
ಶ್ರೀ॥ ದಾಶರಥಿ ಧೀಕ್ಷಿತ್
ಶ್ರೀಮತಿ॥ ರುದ್ರಮ್ಮ
ಶ್ರೀ॥ ಕಾಮತ್
ಇತ್ಯಾದಿ, ಇತ್ಯಾದಿ.

ಬಿಡಿ ಪ್ರತಿ

**ಕಿಕ್ಕಿರಿದ ಪ್ರೇಕ್ಷಕವೃಂದಕ್ಕೆ ಪ್ರದರ್ಶಿಸಲ್ಪಡುತ್ತಿದೆ!**

ಬೆಂಗಳೂರು :

# ಸ್ಟೇಟ್ಸ್



ಮೈಸೂರು :

# ಪ್ರಭುದೇವ (ಪದ್ಮಾ)

**ಆಬಾಲವೃದ್ಧರಾದಿಯಾಗಿ ಪ್ರತಿಯೊಬ್ಬರೂ ನೋಡಬೇಕಾದ**
**ವರ್ಷದ ಅತ್ಯುತ್ತಮ ತೆಲುಗು ಚಿತ್ರ**

ವಿನೋದಾ ರವರ

# ಚಿರಂಜೀವುಲು

(ತೆಲುಗು)

ಎನ್.ಟಿ.ರಾಮರಾವ್, ಜಮುನ,
ಬಾಲಸರಸ್ವತಿ, ಸಿ.ಎಸ್.ಆರ್.
ದಿಗ್ದರ್ಶನ: ವೇದಾಂತಂ ರಾಘವಯ್ಯ.

**VIKRAM** *Release*

ಶೀಘ್ರದಲ್ಲಿಯೇ ನಿರೀಕ್ಷಿಸಿ!!

**ಕೋಲಾರ: ಪ್ರಭಾತ್ ★ ಚಿತ್ರದುರ್ಗ: ಶಂಕರ್ ★ ಚಿಕ್ಕಬಳ್ಳಾಪುರ: ಬಾಲಾಜಿ**



# ಶೀಘ್ರದಲ್ಲಿಯೇ ಬರುತ್ತಿದೆ !...

ನಟವರ್ಗ...
ಬಿ.ಆರ್. ಪಂತುಲು
ಎಂ.ವಿ. ರಾಜಮ್ಮ
ಜಾನಕಿ · ಜಮುನ
ರಾಜಾಸುಲೋಚನ
ರೇವತಿ
ಡಿಕ್ಕಿ ಮಾಧವರಾವ್.
ಉದಯಕುಮಾರ್ ಮತ್ತು
ಟಿ.ಆರ್. ರಾಮಚಂದ್ರನ್

ಪದ್ಮಿನಿ ಪಿಕ್ಚರ್ಸ್

# ರತ್ನಗಿರಿ ರಹಸ್ಯ

...ಕನ್ನಡ...

ಕಥೆ
ಚಿನ್ನಣ್ಣಾಮಲೈ ಲಕ್ಷ್ಮಣ್

ಸಂಭಾಷಣೆ - ಹಾಡುಗಳು
**ಪ್ರಭಾಕರ ಶಾಸ್ತ್ರಿ**

ಸ್ಟುಡಿಯೋ...
ರೇವತಿ

MYSORE STATE, S. CANARA & COORG
RAGHAVENDRA RELEASE
BOMBAY & HYDERABAD STATES
SRINIVAS PICTURES
GADAG

ನಿರ್ಮಾಪಕ - ನಿರ್ದೇಶಕ
**ಬಿ.ಆರ್. ಪಂತುಲು**



ಮಾಂಗಲ್ಯ ತೊಡಿಸುವ ಮಂಗಳ ಮುಹೂರ್ತ ಮುರಿಯಬಲ್ಲ ನಿಷ್ಕರುಣಿ "ದೈವಸಂಕಲ್ಪ"
ಆಳಿವು ಖಚಿತವಾಗಿ ಸಂಕಟ ಸಾಗರದಲ್ಲಿ ಮುಳುಗುವವರನ್ನು ಎತ್ತಬಲ್ಲುದು "ದೈವಸಂಕಲ್ಪ"

**31—8—56 ರಿಂದ ಪ್ರಾರಂಭ**

ಬೆಂಗಳೂರು :
**ಜೈಹಿಂದ್ — ಸೂಪರ್**

ಮೈಸೂರು :
**ರಾಜಕಮಲ್**

ದಾವಣಗೆರೆ :
**ಶಾಂತಿ ಪಿಕ್ಚರ್ ಹೌಸ್**

ಚಿತ್ರದುರ್ಗ :
**ರೂಪವಾಣಿ**

ಚಿಕ್ಕಮಗಳೂರು :
**ಗುರುನಾಥ**

ಚಿತ್ರಮಂದಿರಗಳಲ್ಲಿ ದಿನವಹಿ 3 ಪ್ರದರ್ಶನಗಳು



ಮಹಾತ್ಮಾರವರ—

# ದೈವಸಂಕಲ್ಪ (ಕನ್ನಡ)

**ರಾಜಕುಮಾರಿ — ಎಚ್. ಪಿ. ಸರೋಜ — ನಿರಂಜನ್ — ಓಬಳೇಶ್ವರ್
ಅಪ್ಪುರಾಜ್‌ಮುಧೋಳ್ — ಬಾಲಕೃಷ್ಣ — ಲಕ್ಷ್ಮೀದೇವಿ — ಮಾಸ್ಟರ್
ಹಿರಣ್ಣಯ್ಯ — ಎಂ. ಎಸ್. ಸುಬ್ಬಯ್ಯ — ಉದಯಕುಮಾರ್**

ನಿರ್ದೇಶನ :
**ಎಂ. ಬಿ. ಗಣೇಶ್ ಬಿ. ಎ.**

ಕಥೆ—ಸಂಭಾಷಣೆ—ಹಾಡುಗಳು
**ಎಂ. ನರೇಂದ್ರಬಾಬು**

ಸಂಗೀತ :
**ಪಿ. ಶಾಮಣ್ಣ**

ಸ್ಟುಡಿಯೋ :
**ಪ್ರೀಮಿಯರ್**

**A SHANTA RELEASE**




ಸಂಪುಟ ೧೬ ಸೆಪ್ಟೆಂಬರ್ ೧೯೫೬ ಸಂಚಿಕೆ ೬

## ಕುಹಕಿಡಿಗಳು

---

"ಚಿನ್ನದಗಣಿ ರಾಷ್ಟ್ರೀಕರಣ ನೋಡೇನೇ ಶ್ರೀ ನಾಸರ್ ಸೂಯಜ್ ಕಾಲುವೇನ....... ...." ಅಂತ ಇನ್ನೂ ಯಾರೂ ಅಂದಿಲ್ಲವಂತೆ—

* * *

ಈಜಿಪ್ಟಿನ ಸಚಿವ ಸಂಪುಟಕ್ಕೆ ರಾಜಾಜೀಯವರು ಆಹ್ವಾನಿಸಲ್ಪಟ್ಟಿದ್ದಾರೆಂಬುದು ಶುದ್ಧ ಸುಳ್ಳಂತೆ.

* * *

ಸೂಯಜ್ ಕಾಲುವೆ ಕಂಪೆನಿಗೆ ಒಂದು ಗೀತ ಬೇಕಂತೆ.

—"ನಡುನೀರೊಳು ಕೈಯ ಬಿಡುವರೇನೋ" ಆಗಬಾರದೇ!

* * *

ಜನಸಭೆಯಲ್ಲಿ ಸಾಂಸಾರಿಕ ಕೊಲೆಗಳ ಪ್ರಶ್ನೆ ಕೇಳಲ್ಪಟ್ಟಾಗ, ಮೂವತ್ತು ಮೂರು ಕೋಟಿಯಲ್ಲಿ ಒಂದೇ ಅಂತಹ ಸಂಸಾರದ ನಿದರ್ಶನ ಎಂಬ ಸಮಾಧಾನ ಹೇಳಲ್ಪಟ್ಟಿತಂತೆ.

—ಸಧ್ಯ! ಹೇಳಿದವರ ಸಂಸಾರ ಅಲ್ಲವಲ್ಲಾ! ಎಂದು ಇತರರು ದುಃಖ ಪಡುತ್ತಿರುವರಂತೆ.

* * *

ಸಮತಾ ಸಮಾಜದ ಏಳಿಗೆಗಾಗಿ ದುಡಿಯುತ್ತಿರುವ ನವ್ಯ ದಾರ್ಶನಿಕರೊಬ್ಬರು 'ತ್ರಿಶಂಕು ನರಕ' ಎಂಬ ಪ್ರಬಂಧವನ್ನು ರಚಿಸಿರುವರಂತೆ.

*　　　*　　　*

ಶ್ರೀ ದೇಶಮುಖರು ತಿಂಗಳಿಗೆ "ಒಂದು" ರೂಪಾಯಿ ಪಗಾರದ ಮೇಲೆ, ವಿಶ್ವವಿದ್ಯಾನಿಲಯಗಳ ಸಹಕಾರ ಕೇಂದ್ರ ಸಂಸ್ಥೆಯ ಅಧ್ಯಕ್ಷರಾಗಿ ನೇಮಿಸಲ್ಪಟ್ಟಿದ್ದಾರಂತೆ.

— ಅಂದಮೇಲೆ ಇನ್ನುಮೇಲೆ ವಿಶ್ವವಿದ್ಯಾಲಯದ ಬೋಧಕರ ಗತಿ? — ಹೇಳಿ ಬರೆಯಿಸಿ ಎಂಬುವುದು ನೋಡಿ ಮರೆಯಿರಿ ಎಂದಾಗಬಹುದೇ?

*　　　*　　　*

ಮಧುವಿಗೆ ಆಸೆ ಪಟ್ಟವರು ಜೇನಾಗುತ್ತಾರೆ ಅಥವಾ ಜೈಲಾಗುತ್ತಾರೆ ಎಂದೊಬ್ಬ ಮಿತ್ರರು ಹೇಳಿದ್ದಾರಂತೆ—

—ಆಹ್ಹಾ !

*　　　*　　　*

ಈ ಚಲಮರ ಸೂರ್ಯೋದಯವನ್ನು ಕಂಡೇ ಇಲ್ಲ ಎಂದು ಒಬ್ಬರ ವಿಷಾದ.

— ಪಾಪ ! ಆಗತಾನೇ ಅದು ಮಲಗಿರುತ್ತೆ ! !

*　　　*　　　*

ಬೊಂಬಾಯಿ ಪ್ರಾಂತ್ಯದ ಜತೆಗೆ ಮೈಸೂರು ಪ್ರಾಂತ್ಯವನ್ನು ಸೇರಿಸಿ ಪಶ್ಚಿಮ ಪ್ರದೇಶ ಮಾಡಿರುವುದು ನ್ಯಾಯವೇ — ಎರಡೂ ದ್ವಿಭಾಷಾ ಸಮ್ಮಿಶ್ರ ಪ್ರಾಂತ್ಯಗಳೇ -ಮಂಗಳೂರು ಕನ್ನಡ ಬೆಂಗಳೂರು ಕನ್ನಡ ಒಂದೇ ಎಂದು ಈಗಲೇ ಯಾರಾದರೂ ಹೇಳಬಹುದೇ? ಎಂದು ಕುಹಕಿಯೊಬ್ಬರು ಕೇಳಿದ್ದಾರೆ.

*　　　*　　　*

ಅವಿವಾಹಿತ ಹೆಂಗಸರಿಗೆ ಕಟ್ಟು ಕಥೆಗಳಲ್ಲಿ ಬಲು ಖುಷಿಯಂತೆ.

—ಅಲ್ಲವೇ? ವಿವಾಹಿತ ಹೆಂಗಸರ ಜೀವನವೆಲ್ಲಾ ಕಟ್ಟುಕಥೆಮಯವಿರಬಹುದು ! !

*　　　*　　　*

ಧಡಿಯಾ ಸಾಹುಕಾರ ಡಾಕ್ಟರ ಹತ್ತಿರ ಹೋಗಿ "ಸ್ವಾಮಿ ನನ್ನ ತೂಕ ಇಳಿಯಲು ಏನು ಮಾಡಬೇಕು" ಎಂದು ಕೇಳಿದಾಗ — "ಸಾಹುಕಾರ್ರೇ ! ಇಂತಹ ಹೋಟೆಲಿನಲ್ಲಿ ಮೂರು ತಿಂಗಳು ಊಟ ಮಾಡಿ ಅರ್ಧ ತೂಕ ಇಳಿದೇಹೋಗುತ್ತೆ" ಎಂದು ಹೇಳಿದರೆಂಬುದು ಖಚಿತವಲ್ಲವಂತೆ !

*　　　*　　　*

---

# ಉರಿಗಾಳು

---

ಭಾರತದಲ್ಲಿ ತಯಾರಾಗುವ ಚಿತ್ರಗಳ ಮುಖ್ಯ ದೋಷವೆಂದರೆ, ಅವುಗಳ ಉದ್ದ, ಎಂದು ಶ್ರೀ ಬಿಮಲ್‌ರಾಯ್ ಅವರು ವಿಷಾದಿಸಿದರು........ಅಷ್ಟು ಉದ್ದ, ಎಂಬ ಭಾವನೆಯನ್ನುಂಟುಮಾಡುವ ಕಥೆಯೂ ಒಂದು ದೋಷವೇ.

*   *   *

ಆಡಳಿತ ಚಕ್ರದಲ್ಲಿರುವ ವಿಳಂಬದ ನಿರ್ಮೂಲ ಅಗತ್ಯವಾಗಿ ನಡೆಯಬೇಕು (ಶ್ರೀ ಕಡಿದಾಳ್ ಮಂಜಪ್ಪ)—ನಡೆದರೆ, ಏನೇನೂ ಸಾಲದು-

*   *   *

ಶ್ರೀ ಹನುಮಂತಯ್ಯನವರ ಮನಸ್ಸು ನೋಯಬಾರದು, ಅನಾವಶ್ಯಕವಾದ ಖರ್ಚನ್ನು ತಪ್ಪಿಸಬೇಕು, ಎಂದು ನೂತನ ಮುಖ್ಯಮಂತ್ರಿಗಳು ವಿಧಾನಸೌಧದ ವಿಚಾರವಾಗಿ ಹುಕುಂ ಮಾಡಿದ್ದಾರೆ....ಅಂದರೆ, ಅದರ ಪ್ರವೇಶೋತ್ಸವ ಸಾಂಕೇತಿಕವಾಗಿ ನಡೆಯುವುದು, ಎಂದಾಯಿತು.

*   *   *

ಅಮೇರಿಕಾದಿಂದ ಯಾವ ಪತ್ರಿಕಾ ಪ್ರತಿನಿಧಿಯೂ ಚೀಣಾದ ಆಹ್ವಾನವನ್ನು ಮನ್ನಿಸಿ ಅಲ್ಲಿಗೆ ಪ್ರಯಾಣ ಮಾಡಕೂಡದೆಂದು ಸರ್ಕಾರ ಆರ್ಡರ್ ಮಾಡಿದೆ........ ....ಕಣ್ಣುಮುಚ್ಚಿಕೊಂಡೇ ಕುಡಿದರೆ, ಅದು ಹಾಲೋ ಹಾಲಹಲವೋ ಎಂದು ಬೆಕ್ಕಿಗೆ ಗೊತ್ತಾಗುವ ಬಗೆ ಹೇಗೆ?

*   *   *

ಗುಂಪು ಮನೋಭಾವ ಬೆಳೆಯಬಾರದು; ಯಾವ ಗುಂಪಿನಲ್ಲಿದ್ದರೂ, ಗೋವಿಂದಾ, ಎಂದು ಕೂಗುವ ಮನೋಭಾವ ಬೆಳೆಯಬೇಕು, ಎಂದು ಮಾನ್ಯ ಗೃಹ ಮಂತ್ರಿ ಶ್ರೀ.... .......ವಲ್ಲಭಪಂತರು ಬೋಧಿಸಿರುವರಂತೆ.

*   *   *

ನಮ್ಮ ನಾಡಿನ ಬಗ್ಗೆ ನಿರಂತರವಾಗಿ ಹೊಸ ಹೊಸ ವಿಚಾರಗಳನ್ನು ನಾನು ಕಂಡು ಹಿಡಿಯುತ್ತಲೇ ಇದೇನೆ, ಎಂದು ನೆಹರು ಹೇಳಿದರು....ಶ್ರೀ ಹನುಮಂತಯ್ಯನವರು ಮುಖ್ಯಮಂತ್ರಿ ಸ್ಥಾನಕ್ಕೆ ಮತ್ತೆ ಉಮೇದುವಾರರಾಗಿ ನಿಂತ ಸುದ್ದಿ ಕೇಳಿದ ನಂತರ ನೆಹರು ಹೀಗೆ ಹೇಳಿರಬೇಕೆಂದು ಬಲ್ಲವಲಯಗಳು ತಿಳಿಸುತ್ತಿವೆ.

*   *   *

ಬೆಂಗಳೂರು ವಿಮಾನ ಕಾರ್ಖಾನೆಯಲ್ಲಿ ರೈಲುಗಾಡಿಗಳನ್ನು ತಯಾರಿಸಲು ಪಶ್ಚಿಮ ಜರ್ಮನ್ ಕಂಪನಿಯೊಂದರ ಸಂಗಡ ಭಾರಿ ಒಪ್ಪಂದವಾದದ್ದನ್ನು ಕೇಳಿ, ಪೆರಂಬೂರ್ ರೈಲುಗಾಡಿ ಕಾರ್ಖಾನೆಯವರು ಚಕ್ಕಡಿಗಳನ್ನು ತಯಾರಿಸುವ ಬಗ್ಗೆ ಪೆರಿಯಾಪಟ್ಟಣದ ಕಂಪನಿಯೊಂದಿಗೆ ಇಷ್ಟರಲ್ಲೇ ಒಪ್ಪಂದ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವರಂತೆ.

*                *                *

ಆಗಾಗ ನೂತನ ಮಂತ್ರಿಮಂಡಲಗಳನ್ನ ರಚಿಸುತ್ತಿರಲೇಬೇಕೆಂದು ಅಖಿಲ ಭಾರತ ಪುಷ್ಪಹಾರ ಕೈಗಾರಿಕಾ ಪ್ರವರ್ತಕರು ಕಾಂಗ್ರೆಸ್ ಹೈಕಮ್ಯಾಂಡಿಗೆ ಮನವಿ ಮಾಡಿಕೊಂಡಿರುವರಂತೆ.

*                *                *

ಭಾರತದಲ್ಲಿ ಭೂತ ಭವಿಷ್ಯ ವರ್ತಮಾನಗಳ ಸರಸ ಮಿಳನವಾಗಿದೆ (ನೆಹರು) ....ಯಾವ ವರ್ತಮಾನ ಪತ್ರಿಕೆ ತೆಗೆದರೂ, ಮೊದಲನೇ ಪುಟದಲ್ಲಿ ಒಂದು ಭೂತ, ಕೊನೇ ಪುಟದಲ್ಲಿ ಭವಿಷ್ಯ.

*                *                *

ಇದೀಗ, ಭಾರತದೇಶ ಹೊಸ ಯುಗವೊಂದನ್ನು ಆರಂಭಿಸಿದೆ (ಶ್ರೀ ಎಂ. ಗೋಪಾಲಮೇನನ್)........'ಕಲಿ'ಯುಗವನ್ನು ಬಿಟ್ಟು 'ಕಲಿಯುಕೂಡದು' ಎಂಬ ಯುಗವನ್ನ ಆರಂಭಿಸಿದೆ.

*                *                *

ಮೈಸೂರನ್ನೂ ಬೊಂಬಾಯಿ ರಾಜ್ಯವನ್ನೂ ಪಶ್ಚಿಮ ಜೋನಿಗೆ ಸೇರಿಸಿರುವುದನ್ನು ಮದ್ರಾಸ್ ಪ್ರತಿನಿಧಿಗಳು ವಿರೋಧಿಸಿದಾರೆ.... .... ಕರ್ಣಾಟಕ ಸಂಗೀತ ಉತ್ತರಾಧಿಯಾಗಿ ಮಾರ್ಪಡುತ್ತದೆ, ಎಂಬ ಭೀತಿಯಿಂದ ಇರಬೇಕು.

*                *                *

ಸಾಹಸ ಹಾಸ್ಯ, ಇವೆರಡೂ ಈ ಚಿತ್ರದ ಮುಖ್ಯ ಲಕ್ಷಣಗಳು (ಟೀಕೆ)........ ಹಾಸ್ಯ ಕೇಳಿದರೆ, ಇದು ಹಾಸ್ಯವೆಷ್ಟಿ ಎಂಥ ಸಾಹಸ ಎನಿಸುತ್ತದೆ; ಸಾಹಸ ನೋಡಿದರೆ, ಇದು ಸಾಹಸವೆ? ಎಂಥ ಹಾಸ್ಯ, ಎನಿಸುತ್ತದೆ.

*                *                *

ನೆಹರು ಒಬ್ಬರು ಅಂತರ್ರಾಷ್ಟ್ರೀಯ ವ್ಯಕ್ತಿ (ಅಮೇರಿಕನ್ ಪತ್ರಿಕೆ) ಓ! ಇನ್ನು ಅದಕ್ಕೂ ಒಂದು ಲಂಡನ್ ಸಮ್ಮೇಲನ ನಡೆಯಿಸುತ್ತಾರೋ, ಏನೋ?

*                *                *

---

# ವಿಧಾನಸೌಧ—ಸಲಹೆಗಳು

ವಿಧಾನ ಸೌಧದ ವಿಷಯದಲ್ಲಿ ಸಾರ್ವಜನಿಕರ ಸಾಕ್ಷ್ಯವನ್ನು ಆಹ್ವಾನಿಸಿದ್ದಾರಂತೆ. ಅಂದ ಮೇಲೆ ಸಲಹೆಗಳಿಗೆ ಸ್ಥಾನ ವಿದೆಯೋ ಇಲ್ಲವೋ ಆ ದೇವ ಬಲ್ಲ ಆದರೂ "ಕರ್ಮಣ್ಯೇವಾಧಿಕಾರಸ್ತೇ" ನಂಬುವ ನಾವು ನಮ್ಮ ಸಲಹೆಗಳನ್ನು "ಗೋವಿಂದಾ" ಎಂದು ತೂರಿ ಬಿಡುತ್ತಿದ್ದೇವೆ.

ಸಮಿತಿಯವರಲ್ಲಿ ಸವಿನಯ ಬಿನ್ನಹ. ವಿಧಾನಸೌಧವು ಅತ್ಯಂತ ಉಪಕಾರಿಯಾಗಲು, ಭಾರತದ ಹೆಮ್ಮೆಯ ಮೂರ್ತಿಯಾಗಲು ಈ ಕೆಲವು ಸಲಹೆಗಳನ್ನು ನೀವು ಜಾರಿಗೆ ಮಾಡಿದರಾದೀತು–

೧. ಅಧ್ಯಕ್ಷರ ಮೇಜಿನ ಮೇಲೆ "ತೀರ್ಪನ್ನು ಕಾದಿರಿಸಲಾಗಿದೆ" ಎಂಬ ಒಂದು ಬೋರ್ಡನ್ನು ಇಟ್ಟು ಅದನ್ನು ಬಟ್ಟೆಯಿಂದ ಮುಚ್ಚಿರಬೇಕು. ಕಾರಣ:— ಸಂಶಯಗ್ರಸ್ತ ವಿಷಯದ ಚರ್ಚೆ ಏರ್ಪಟ್ಟಾಗ, ವಿಧಾನ ಪರಿಷತ್ತಿನ ಕಾರ್ಯದರ್ಶಿಯು ಈ ಬೋರ್ಡನ್ನು ತಕ್ಷಣ ಅನಾವರಣ ಮಾಡುವ ಹಾಗಿರಬೇಕು. ಈ ಬೋರ್ಡಿನ ಎರಡೂ ಪಕ್ಕಗಳಲ್ಲಿ ಈ "ತೀರ್ಪನ್ನು ಕಾದಿರಿಸಲಾಗಿದೆ" ಎಂದು ಬರೆಯಲ್ಪಟ್ಟಿರಬೇಕು. ಅಧ್ಯಕ್ಷರಿಗೂ ತಿಳಿಯಬೇಕಲ್ಲವೇ ?

೨. ಆಹ್ವಾನಿತರಾದ ಹೊರಗಿನವರು ಕೂಡುವಲ್ಲಿ, ಸಭಾಂಗಣದಲ್ಲಿ ನಡೆದುದೆಲ್ಲಾ ಕಾಣುವಂತೆಯೂ, ಆಡಿದುದೆಲ್ಲಾ ಕೇಳಿಸದಂತೆಯೂ ಏರ್ಪಾಡುಮಾಡಬೇಕು

— ಕಾರಣ ಹೇಳಬೇಕೇ ? ನಮ್ಮ ಪ್ರೌಢಿಮೆ ಅವರಿಗೇಕೆ ಅರ್ಥವಾಗಬೇಕು.

೩. ವಿಧಾನಸಭೆಯ ನಾಯಕ ಮುಖಂಡರ ಕುರ್ಚಿಯ ಬಲಗೈ ಕೆಳಬದಿಯಲ್ಲಿ –ಸಭಾಂಗಣದ ದೀಪಗಳನ್ನೂ ಧ್ವನಿವಾಹಕ ಸಲಕರಣೆಗಳನ್ನೂ, ಹಂತ ಹಂತವಾಗಿ ಆರಿಸುವ ಸ್ವಿಚ್ಚುಗಳಿರಬೇಕು.

—ಕಾರಣ ಬೇಜಾರಾದಾಗ, ಅನಾನುಕೂಲವಾದಾಗ ಸಭೆಯನ್ನು ಮುಂದಕ್ಕೆ ಹಾಕಲು ಸೌಕರ್ಯವಿರಲಿಕ್ಕೆ.

೪. ಮೇಲ್ಮನೆಯ ಮಂದಿರದಿಂದ ಕೆಳಮನೆಯ ಮಂದಿರಕ್ಕೆ ಹೋಗುವ ಸ್ವಸಂಚಾರಿ ಏಣಿಯನ್ನು ಆಗಾಗ್ಗೆ ತ್ರಿಶಂಕು ಪಾತ್ರದಲ್ಲಿ ನಿಲ್ಲಿಸಲು ಪಕ್ಷದ ನಾಯಕನಿಗೆ ಸೌಕರ್ಯವಿರಬೇಕು.

— ಕಾರಣ ಇಲ್ಲಿ ನಡೆದುದುದರ ಮೇಲೆ ಟೀಕೆಗಳಾಗದಂತೆ ಹಾಗಾಗಿ ಸಮತಾ ಸನ್ನಿವೇಶಕ್ಕೆ ಅನುಕೂಲವಾಗಲೋಸುಗ.

೫. ಸಚಿವರ ಕೊಠಡಿಗಳಿಗೆ–ಒಳಕ್ಕೆ–ಹೊರಕ್ಕೆ–ಎಂದು ಹೆಸರಿಟ್ಟ ಬಾಗಿಲುಗಳಿರಬೇಕು. ಅವರ ಮೇಜಿನ ಮೇಲೆ ಕಾಗದದ ಫೈಲುಗಳಿಗಿರುವಂತೆ.

—ಕಾರಣ ವಿಶದೀ ಕರಿಸಬೇಕೇ ?

೬. ವಿಧಾನ ಸಭಾ ಮಂದಿರದಲ್ಲಿ ಸರಬರಾಜು ಮಾಡುವ ಮೇಜುಗಳಿಗೆ ಕುಟ್ಟಿದರೆ ಕೋಗಿಲೆಯಂತೆ ಕುಹೂ ಗುಟ್ಟುವ ಮರದ ಹಲಿಗೆಗಳನ್ನು ಹಾಕಿಸಬೇಕು. ಈ ಕಾರಣದಿಂದಾಗಿ ಕಾವೇರುವ ಭಾಷಣಗಳು ಕಡಿಮೆಯಾಗಿ ಸಮತೆ ಸಿದ್ಧಿಯಾಗುತ್ತದೆ.

೭. ಹೊಂಗೆ ಎಣ್ಣೆ ಒತ್ತಿ ನೀರು ಹಾಕಿ ಅಭ್ಯಂಗನ ಮಾಡಿಸುವ ಸ್ನಾನದ ಕೊಠಡಿಗಳಿರಬೇಕು, ಪ್ರತಿಯೊಂದು ಅಂತಸ್ತಿನಲ್ಲೂ.

— ಕಾರಣ ತಲೆ ಬಿಸಿಯಾಗಿ ರೇಗಾಡುವವರ ತಲೆ ತಂಪುಮಾಡಲು ಇದಕ್ಕೆ ತಂಪಾದ ಮೇಲೆ ಸದಸ್ಯರಿಂದಲೇ ರುಸುಂ ವಸೂಲ್ಮಾಡಬಹುದು, ಸಾಧ್ಯವಾದರೆ.

೮. ಮಹಿಳಾ ಸದಸ್ಯಣಿಯರು ಹೆಚ್ಚಾಗಬಹುದಾದುದರಿಂದ ಅವರ ಸೌಕರ್ಯಕ್ಕೆಂದೇ ಅನುಕೂಲಗಳನ್ನು ಕಲ್ಪಿಸುವ ಪ್ರತ್ಯೇಕ ಶಾಖೆ ಇದ್ದೇ ಇರಬೇಕು.

— ಕಾರಣ ಹೇಳಬೇಕೇ?

೯. ಎಳೆ ಮಕ್ಕಳನ್ನು ಆಡಿಸಿ ನೋಡಿಕೊಳ್ಳುವ ಶಾಖೆಯೂ ಅತ್ಯವಶ್ಯಕ.

— ಕಾರಣ ಸಮತಾ ಸಮಾಜದಲ್ಲಿ ಎಳೆ ಮಾತೃಗಳಿಗೂ ಅವಕಾಶಬೇಕು !!

೧೦. ವಿಧಾನ ಸೌಧದ ಒಂದೊಂದು ಅಂತಸ್ತಿನಲ್ಲೂ, ಒಂದೊಂದು ಕೊಠಡಿಯು ಜನ ಜ್ಯೋತಿಷಿ ಸಾರ್ವಭೌಮನಿಗೆ ಮಿಸಲಾಗಿರಿಸಬೇಕು.

— ಕಾರಣ ಅವನ ಅಪ್ಪಣೆ ಒಪ್ಪಿಗೆ ಇಲ್ಲದೆ ಯಾವ ರಾಜಕಾರ್ಯವೂ ನಡೆಯುವುದು ದುಸಾಧ್ಯ ! ಅಥವಾ ಅಸಾಧ್ಯ ಎಂದೇ ಎನ್ನಬಹುದಲ್ಲವೇ ?

೧೧. ರೈಲ್ವೆನಿಲ್ದಾಣಗಳಲ್ಲಿ ಮೂರನೆ ತರಗತಿಯ–ಇಂದಿನ ಎರಡನೆ ತರಗತಿಯ ವಿಶ್ರಾಂತಿ ವಠಾರಗಳಿರುವಂತೆ ವಿಧಾನ ಸೌಧದ ಬಲು ಹತ್ತಿರದಲ್ಲೇ ಪಕ್ಷದ ಪುಢಾರಿಗಳಿಗಾಗಿ ಬೇರೊಂದು ಲಾಯವನ್ನೂ ಕಟ್ಟಿಸಿಟ್ಟಿರಬೇಕು. ಇದರ ಬಾಗಿಲು ಎತ್ತರ ಎರಡೇ ಅಡಿ ಇದ್ದರೂ ಆಯಿತು, ಆದರೆ ಬಾಯಗಲ ೧೬ ಅಡಿ ಇರಲೇಬೇಕು.

ಕಾರಣ ಸರ್ವವೇದ್ಯ !!

೧೨. ವಿಧಾನ ಸಭಾಂಗಣದ ಪ್ರತಿ ಪಕ್ಷದವರು ಕೂಡುವ ಬಳಿಯಲ್ಲಿ ೧೬ ಅಡಿ ಅಗಲ ೮ ಅಡಿ ಎತ್ತರ ಇರುವ ಹೆಬ್ಬಾಗಿಲನ್ನು ರಚಿಸಬೇಕು.

—ಕಾರಣ ಪ್ರತಿ ಪಕ್ಷದವರು ಒಮ್ಮತದಿಂದ ಧೂಮಪಾನ ಮಾಡಲು walk out ನಟಿಸುವಾಗ ಬಾಗಿಲು ಅವರೆಲ್ಲರಿಗೂ ಸಾಕಷ್ಟು ಅಗಲವಾಗಿಯೂ ಇರಬೇಕು! ಹಾಗೂ ಅವರುಗಳ ಮನಸ್ಸಿನಲ್ಲಿ ಅವರು ದೇಶಸೇವೆ ಮಾಡುತ್ತಿದ್ದೇವೆಂಬ ಅಹಂಕಾರ ಆಗ ಅತಿಯಾಗಿರುವುದರಿಂದ ಅವರ ಎತ್ತರ ಹೆಚ್ಚಿರುತ್ತೆಂದು ಅವರಿಗೆ ಭ್ರಾಂತಿಯಾದ ಕಾರಣ, ಅಷ್ಟಗಲ ಅಷ್ಟೆತ್ತರದ ಬಾಗಿಲು ಬೇಕೇ ಬೇಕು ಅವರನ್ನು ಶಾಂತಿಗೊಳಿಸಲು ಅದಕ್ಕೆ ವಾಕ್ ಔಟ್ ದ್ವಾರ ಎಂದು ನಾಮಕರಣವನ್ನು ಮಾಡಬಹುದು.

೧೩. ಸರ್ಕಾರದ ಕಾರ್ಯದರ್ಶಿಗಳ ಕೊಠಡಿಗಳನ್ನೆಲ್ಲಾ ಒಂದೇ ಮಹಾರದಲ್ಲಿ ಏರ್ಪಡಿಸಬೇಕು–

—ಕಾರಣ ಇವರಿಂದ ಅವರಿಗೆ ಫೈಲುಗಳು ಹಾರಾಡಲು ಹೆಚ್ಚು ಸಮಯ ಬೇಕಾಗುವುದಿಲ್ಲ.

೧೪. ಮೂಲ ಭೂತವಾಗಿ ಯಾವುದನ್ನಾದರೂ ಓದಿ, ಟೀಕೆ ಮಾಡುವ ಕೇಸ್ ವರ್ಕರ್ ಎಂಬ ಮಹಾತ್ಮನಿಗೆ ಅವನು ಕೂಡುವ ಕುರ್ಚಿಯ ಹಿಂದೆ ವಿಚಾರಿಸಲು ಬಂದವರು ಅನುಕೂಲವಾಗಿ ಕೂಡಲು ಒಂದು ತ್ರಿಪಾದ ಸ್ಟೂಲನ್ನು ಒದಗಿಸಬೇಕು ಅಂಗೈ ಹಿಂಗೈಗೆ ತಾಕಿದುದನ್ನು ಕಾಣದಿರುವಂತೆ ಅವರ ಮೇಜಿನ ಎತ್ತರವನ್ನು ರಚಿಸಬೇಕು.

—ಕಾರಣ ನಿಮಗೆ ಗೊತ್ತಿಲ್ಲವೇ?

೧೫. ಸಚಿವ ಕೊಠಡಿಗಳ ದ್ವಾರಪಾಲಕರಿಗೆ ಯಾವ್ಯಾವ ಬೀಡಿ ಖಾಯಷಾಗಿರುತ್ತೋ ಅದನ್ನು ಮಾರುವ ಬೀಡಿ ಅಂಗಡಿಯೊಂದು ಸೌಧದ ಹೊರಬಾಗಿಲಲ್ಲೇ ಏರ್ಪಡಿಸಬೇಕು.

—ಕಾರಣ ಇಂತಹ ಸಚಿವರ ಸಂದರ್ಶನಕ್ಕೆಂದು ಬಂದವ ಅಂತಹ ದ್ವಾರ ಪಾಲಕನನ್ನು ಒಲಿಸುವ ಸಾಧನೆಗೆ ಸಹಕಾರವಾಗಿರಲಿಕ್ಕೆ. ಅಂತಹ ಬೀಡಿ ಅಂಗಡಿಯ ಲೈಸೆನ್ಸ್ ಕೊಡುವಾಗ್ಗೆ ಆ ದ್ವಾರ ಪಾಲಕರ ಸಮಿತಿಯೊಂದು, ಪರೀಕ್ಷೆ ನಡೆಸಿ ಒಮ್ಮತದಿಂದ ತೀರ್ಪನ್ನೀಯಬೇಕು.

೧೬. ಸೌಧದಲ್ಲಿ ನಾಲ್ಕು ಆಸ್ಪತ್ರೆಗಳ ಏರ್ಪಾಡಾಗಬೇಕು. ಆಯುರ್ವೇದ, ಯುನಾನಿ, ನಿಸರ್ಗಚಿಕಿತ್ಸೆ, ಖಾಯಿಲೆಯಾದವರಿಗೆ ಈ ರೀತಿ.

—ಕಾರಣ ಕಾರಣಾಂತರಗಳಿಂದ.

೧೭. ಸೌಧದ ಗೋಪುರದ ಮೇಲೆ ಕೆಂಪು ದೀಪವೊಂದು, ಹಳದಿಯ ದೀಪವೊಂದು, ಶ್ವೇತದೀಪವೊಂದು ಇರಬೇಕು.

—ಕಾರಣ! ದೇಶಕ್ಕೆ ಆಕಾಶದಲ್ಲಿ ಹೊರದೇಶದಿಂದ ಬಂದ ಹಿರಿಯತಿಥಿಗಳ ಮನವನ್ನು ಆಕಾಶದಿಂದಲೇ ಒಲಿಸಿಕೊಳ್ಳಲೋಸುಗ.

೧೮. ಕ್ಷೀಪ್ರದಲ್ಲಿ ಇಸ್ತ್ರಿಯನ್ನು ಮಾಡುವ ಅಗಸಾಗಾರವನ್ನು ಮೊದಲ ಮೆಟ್ಟಿಲ ಪಕ್ಕದಲ್ಲಿಯೇ ಏರ್ಪಡಿಸಿರಬೇಕು. ಅಲ್ಲಿ ಇಸ್ತ್ರಿ ಮಾಡಿದ ಟೊಪ್ಪಿಗೆಗಳ ಲೆಕ್ಕವನ್ನಿಡುವ ಒಂದು ಸ್ವತಂತ್ರ ಮೆಷಿನ್ ಇರಬೇಕು. ಆ ಸ್ವತಂತ್ರ ಮೆಷಿನ್ನಿನ ಲೆಕ್ಕದ ಮೇಲೇ ಅಕೌಂಟೆಂಟ್ ಜನರಲ್ ಮಹಾಶಯರು ಆ ಅಗಸಾಗಾರದ ಬಾಡಿಗೆದಾರನಿಗೆ ಸರಕಾರದಿಂದ ಹಣ ಪಾವತಿ ಮಾಡಲು ಸಾಧ್ಯವಾಗುವಂತೆ ಏರ್ಪಾಡಿರಬೇಕು.

—ಕಾರಣ ಹೊತ್ತ ಟೊಪ್ಪಿಗೆ ಗರಿಗರಿಯಾಗಿರದಿದ್ದರೆ-ಇತ್ತ ಭಾಷಣ ಗರಿಗರಿಯಾಗಿರದು.

೧೯. ಸೌಧದ ಎದುರಿನಲ್ಲೇ ಮೋಜಿನವನ ಕಾರ್ಯಾಲಯವೊಂದು ಅತಿ ಆಧುನಿಕ ರೀತಿಯಲ್ಲಿ ಸಜ್ಜುಗೊಳಿಸಲ್ಪಟ್ಟಿರಬೇಕು.

ಕಾರಣ! ಸಮತಾಸಮಾಜದಲ್ಲಿ ಅಧ್ಯಕ್ಷನ್ನಿಂದ, ಶುರುವಾಗಿ ಅತಿಥಿ ಮುಖಾಂತರ, ಸದಸ್ಯ, ಸಹಕಾರ್ಯದರ್ಶಿ- ಸರ್ವರ ಪಾದರಕ್ಷೆಯಲ್ಲಿ ಒಮ್ಮೊಮ್ಮೆ ರೇಗಿಸಿ ಎದ್ದು ನಿಂತ ಮೊಳೆಗಳ ಚೂಪು ತುದಿಯನ್ನು ಸಮತೆಗೊಳಿಸಲು:-

೨೦. ಇವನ್ನೆಲ್ಲಾ ಬರೆಯುವ ಪತ್ರಿಕೋದ್ಯಮಿಗಳಿಗಾಗಿ — ಬೇರೊಂದು ಪತ್ರಿಕಾ ಸೌಧವನ್ನು ಇದಕ್ಕಿಂತ ದೊಡ್ಡ ರೀತಿಯಲ್ಲಿ ಈಗಲೇ ರಚಿಸುವುದು.

ಕಾರಣ! ನಮಗೆಲ್ಲಾ ನೆಲೆ ಬೇಡವೇ ?.

— ಲೀಲಾ.

---

ಹೆಸರಾಂತ ಗ್ರಂಥಕರ್ತನೊಬ್ಬನು ನವ ವಧೂವರರಿಗೆ ತನ್ನ ಆತ್ಮಕಥೆಯನ್ನು ಆಶೀರ್ವಾದ ರೂಪವಾಗಿ ಕೊಡುತ್ತಿದ್ದಾನಂತೆ.

—ಏನನ್ಯಾಯ? ಅತನಿಗೆ ಕಂಡಹಾಗೆ ಮೂರು ಮದುವೆ ! !

* * *

ಮೆಣಸಿನಕಾಳಿನಲ್ಲೇ ಬೆಳೆದು ಪ್ರವರ್ಧಮಾನಕ್ಕೆ ಬರುವ ಒಂದು ಜಾತಿಯ ಬೂಷ್ಟು ಕಂಡುಹಿಡಿಯಲ್ಪಟ್ಟಿದೆಯತೆ—

—ಹಳೇ ವಿಷಯ ಇದು! ಖಾರದ ಹಿನ್ನೆಲೆಯದು – ಪ್ರಗತಿ ನಮ್ಮ ರಾಜಕೀಯದ ಬೂಷ್ಟು – ಅಲ್ಲವೇ?

* * *

# ಕೊರವೇಶ್ವರ ವಚನಗಳು—
# ನಸ್ಸೇರನ ಕುರಿತು

('ಅಕ್ಕ' 'ಅಣ್ಣ'ನವರ ಕ್ಷಮೆಯನ್ನು ಪ್ರಾರ್ಥಿಸಿ)

---

ಯಾಂಕಿ ಬ್ರಿಟಿಷರು ಸೇರಿ ಎನ್ನ ಶೂಲದಲಿಕ್ಕ ನೋಡಿದರಯ್ಯ; ಕೊಡವೆ ವೆಂದುಸುರಿ ಕೊನೆಗೆ ಕೊಟ್ಟರಲ್ಲಾ ಕೈಯ! ನಿಮ್ಮ ಘಾತಕತನ ಮಸೆದುಗಾಗಿ ತಾಗಿತ್ತಯ್ಯ! ಕಪ್ಪೆ ಸರ್ಪನ ನೆಳಲಲ್ಲಿದ್ದಂತಾಯಿತಯ್ಯ! ಎನ್ನ ಆಸ್ವಾನ್ ಡ್ಯಾಮ್ ಯೋಜನೆ ಗಾಳಿಗೋಪುರವಾಗುವುದ ಸೈರಿಸೆನಯ್ಯ!—ಎಂದು ನಸ್ಸೇರ ಕನಲುವುದ ಕಂಡ ಕೊರವೇಶ್ವರ!

ಅಯ್ಯಗಳೇ, ನೀವು ಕೇಳಿದರೆ ಕೇಳಿ, ಕೇಳದಿದ್ದರೆ ಬಿಡಿ; ಸೂಯಜ್ ನಿಮಗಿರುವುದ ಸೈರಿಸಲಾರೆನಯ್ಯ! ಅಯ್ಯಗಳಿರ ನೀವು ಒಲಿದರೆ ಒಲಿಂಯುರಿ, ಒಲಿಯ ದಿದ್ದರೆ ಬಿಡಿ; ನಾನಿಮ್ಮ ಓಡಿಸಲಾರದೆ ಉಳಿಯೆನಯ್ಯ! ನೀವು ಮೆಚ್ಚಿದರೆ ಮೆಚ್ಚಿ; ಮೆಚ್ಚದಿದ್ದರೆ ಬಿಡಿ; ಸೂಯೇಜ ಕೊಳ್ಳಲಾರದೆ ಬಿಡೆನಯ್ಯ!—ಎಂದು ನಸ್ಸೇರ ಸೆಟೆದು ನಿಲುವುದ ಕಂಡ ನಮ್ಮ ಕೊರವೇಶ್ವರ!

ಏಷ್ಯಾಕ್ಕೆ ಪಥವಾಗಿ ಮೆರೆದಿತ್ತು ಸೂಯೆಜ್! ಎಣ್ಣೆ ಬಾಗಿಲದಾಗಿ ಮೆರೆದಿತ್ತು ಸೂಯೆಜ್! ಸಾಮ್ರಾಜ್ಯಗಳ ಕಟ್ಟಲನುವಾಗಿತ್ತು ಸೂಯೆಜ್! ನಸ್ಸೇರ ನೀಗದನು ತನ್ನದೆಂದು ಕಾಡುವನಲ್ಲಿ—ಎಂದು ಬಿಳಿಯರ್ ಕಂಗೆಡುವುದ ಕಂಡ ಕೊರವೇಶ್ವರ!

ನಾವೊಂದ ನೆನೆದರೆ ದೈವ ತಾನೊಂದು ನೆನೆವುದು! ಮಣಿವನೆಂದು 'ಡಾಲರಿಲ್ಲ! ಎಂದರೆ ಸೂಯೇಜನೇ ಸೆಳೆದುಕೊಂಡ! ದಂಡಿಸುವೆವೆಂದು ಬೆದರಿಸಿದರೆ ಕ್ರುಶ್ಚೇವ ನನ್ನಪ್ಪುವ! 'ಎಷ್ಟೊಂದು ಕಾಡುತಿದೆ ಈ ಪ್ರಚ್ಛನ್ನ ಸಮರ'—ಎಂದು ಡಲ್ಲೇಶ ಕಂಗೆಡುತಿಹುದ ಕಂಡ ಕೊರವೇಶ್ವರ!

ಬ್ರಿಟಿಷಾದಿಗಳಿಗೆ ಸೂಯೆಜ್ ಕೈ ತಪ್ಪಿದುದು ದುಃಖವಾಗಿ ಕಾಡಿತ್ತು ನೋಡ! ನಸ್ಸೇರಿಗೋ ಅದು ತನ್ನದಾಯ್ತೆಂದು ಹೆಮ್ಮೆಯೆನಿಸಿಹುದು ನೋಡ! ಲೋಕವೆಲ್ಲಿ ಆಟವಿದ ಕಂಡು ಬೆರಗಾಗಿಹುದು ನೋಡ! ಆದರೆ ಕ್ರುಶ್ಚೇವನೇಕೆ ಸಂತಸಗೊಂಡು ಹಲ್ಗಿರಿಯುತಿರುವ?—ಎಂದು ಮೂಗುಜ್ಜುವನು ನಮ್ಮ ಕೊರವೇಶ್ವರ!

ಶಸ್ತ್ರಾಸ್ತ್ರ ಕೊಡಲೊಲ್ಲೆನೆಂಬಿರಾ? ಕ್ರುಶ್ಚೇವನಿಹನೆಂಬೆ! ಡಾಲರಿಲ್ಲವೆಂಬಿರಾ? ಸೂಯೆಜ್ ನನ್ನದೆಂಬೆ! ಸ್ಟರ್ಲಿಂಗ್ ಮುಳುಗಿಸುವಿರಾ? ಎಣ್ಣೆಯುಂ ಸೊನ್ನೆಗೈವೆ! ಕಿಡಿಕಿಡಿಯಾದೊಡೆ ಬಡಿಗೆ ಹಿಡಿದು ನಿಲುವೆ! ನೀವ್ಯಾಕೆ? ನಿಮ್ಮ ಹಂಗ್ಯಾಕೆ? ನನ್ನ ಸೂಯೆಜ್ ಒಂದಿದ್ದರೆ ಸಾಕೆ!—ಎಂಬವನ ಧಾಷ್ಟ್ರ್ಯವ ಕಂಡು ತಲೆದೂಗುತಿರುವ ನಮ್ಮ ಕೊರವೇಶ್ವರ!

ಹೆರರ ಜಗಲಿಯಲ್ಲಿ ಹಸೆ ಬಿಡಿಸಿ ಕುಳಿತು ಏಳೆಂದರೆಂದು ಕನಲಿದೊಡೆಂತಯ್ಯ! ಹೆರರ ಬೆನ್ನನೇರಿ ಕುಳಿತು ಕೆಳಗಿಳಿಯಲು ನಾಚಿದೊಡೆಂತಯ್ಯ! ಹೆರರ ರಾಜ್ಯಗಳಲ್ಲಿ ಕಂಪೆನಿಯ ಕಟ್ಟಿ ರಾಷ್ಟ್ರೀಕರಣಕ್ಕಂಜಿದೊಡೆಂತಯ್ಯ! ಬ್ರಿಟಿಷ ಫ್ರೆಂಚ ಅಮೇರಿಕಾದಿಗಳೆ ಕೇಳಿರಯ್ಯ! ಲೋಕದಲ್ಲಿ ಮುಳ್ಳು ಬೀಜವ ಬಿತ್ತಲ್ ಮುಳ್ಳೇ ಬೆಳೆದರೆ ಕೋಪವನು ತಾಳದೆ ಸಮಾಧಾನಿಗಳಾಗಿರಬೇಕಯ್ಯಗಳೇ — ಎಂದು ಸ್ವಾಂತ್ವನ ಗೊಳಿಪ ನಮ್ಮ ಕೊರವೇಶ್ವರ.

— ರಾಮಿ.

---




ಹೀಗಂದೋರನ್ನ ಅಗ್ದೀ ಹಿಂದಕ್ಕೇ ತುಳಿದರಲ್ಲಪಾ! ಅವರು!!

# ನವ್ಯ (ಕಳ್ಳ) ಕವಿತೆ!

ಕತ್ತಲಿನ ನಡುರಾತ್ರಿ !
ತಮಸೋ ಮಾ ಜ್ಯೋತಿರ್ಗಮಯ !
ಸುತ್ತಲು ಕತ್ತಲು, ನೀರವದ ಕೊತ್ತಲು,
ಬೆತ್ತಲೆ ನಿಂತಿವೆ, ಊರಿನ ಮನೆಗಳು.
ಆ ರಾತ್ರಿ,
ತಾರೆಗಳ ನಸುಬೆಳಕು !
ಉದ್ದನೆಯ ಬೀದಿಯ ಉದ್ದಕು ನಡೆವರಿಬ್ಬರು.
ಓಂ ! ಸಹನಾವವತು !
ಟಪ್ ! ಟಪ್ ! ಬೂಟ್ಸಿನ ಸಪ್ಪಳ ;
ಯಾರದು ?
ನಡೆವರು ಸಲೀಸು,
ಬೀಟಿನ ಪೋಲೀಸು.
ಶೆಟ್ಟರ ಅಂಗಡಿ ಜಗುಲಿಯ ಮೂಲೆಯ ಹಿಡಿದನೊಬ್ಬನು.
ನೆಟ್ಟಗೆ ನಡೆದನು ಗುಡಿಯಾ ಮೂಲೆಗೆ ಉಳಿದನೊಬ್ಬನು.
"Oh! They let the paupers go to sleep!"
ಗುಡಿಯಾ ಮುಂದಿನ ಹಜಾರದಲ್ಲಿ ತಿರುಕರು ಬಿದ್ದಿಹರು.
ಸೀಟಿಯ ಬಾಯಿಗೆ ಸಿಕ್ಕಿಸಿ ಒಬ್ಬನು ಪೋಲೀಸು,
(ಅದೇ, ಶೆಟ್ಟರ ಜಗುಲಿಗೆ ಹೋದವನು)
ಮುದುರಿದನಲ್ಲೇ ಜೊಂಪೇರಿ !
ಸೀಟಿಯ ಬಾಯಿಗೆ ಸಿಕ್ಕಿಸಿ ಒಬ್ಬನು ಪೋಲೀಸು,
(ಅದೇ, ಗುಡಿಯ ಹಜಾರಕೆ ತೆರಳಿದವ)
ಒರಗಿದನಲ್ಲೇ ನಿದ್ರೆಯಲಿ !
ಸೋಯೆ ಹು ವೇ ಹೈಂ, ಚಾಂದ್ ಔರ್ ತಾರೆ,
ಆಜ್ ಕೀ ರಾತ್ ಅಂಧಿಯಾರೇ.... ...
ಗೊರಕೆಯೊಡನೆ ಸೀಟಿಯ ಶಬ್ದ
ಸರಕನೆ ಕಂಡರು ಕಳ್ಳರ ಜೊತೆ !
(ಜೀವನ್ ಭದ್ರಾಣಿ ಪಶ್ಯತಿ !)

ಬೌ ಬೌ, ಬೌ ಬೌ, ಬೌ ಬೌ, ಬೌ ಬೌ, ಬಂದುದು ಬಗುಳುವ ನಾಯಿ!
ಛೀ ಥೂ, ಛೇ ಛೇ, ತೊಲಗು ಹಾಳಾದ್ದೇ, ....... ...ನೀ ಸಾಯಿ;
ಕಲ್ಲೊಂದೆತ್ತಿದ ಕಳ್ಳನು ಎಸೆಯೆ
ಅಲ್ಲೇಬಿಟ್ಟನು ನಾಯ್ತಾನ್ ಓಡೆ.
ಅಹಿಂಸಾ ಪರಮೋಧರ್ಮಃ

ಬೆಳಗಾಗೇಳುತ ಶೆಟ್ಟಿಯ ಪೆಟ್ಟಿಗೆಯು
ಕಬ್ಬಿಣ ಪೆಟ್ಟಿಗೆಯು
ದುಡ್ಡಿನ ಪೆಟ್ಟಿಗೆಯು
ಬರಿಯಾ ಪೆಟ್ಟಿಗೆಯು

Rob peter to pay paul.

ಪಾಪಸೇ ಘಟೀ ಲಕ್ಷ್ಮೀ–ಸಹಗಯೇದಾಸ ಕಬೀರ್.
ಬೆಳಗಾಗೇಳುತ ಪೂಜಾರಿ ನೋಡಿದ
ದೇವರ ಮೂರ್ತಿಯನು,
ಹನುಮನ ಮೂರ್ತಿಯನು,
ಬೆಳ್ಳಿಯನಾಮ, ಬೆಳ್ಳಿಯ ಕಿರೀಟವಿಲ್ಲದ ಹನುಮನನು
ಶಿಂದಾಘಟ್ಟದ, ಆ ಹನುಮದೇವರು ಹಿಂದುಮುಂದಾಗಿತ್ತು.
ಸಾಹಸೇ ಶ್ರೀಃ ಪ್ರತಿವಸತಿ,
ನ ಸಾಹಸಂ ಅನಾರುಹ್ಯ ನರೋಭದ್ರಾಣಿ ಪಶ್ಯತಿ.
ಬೀಟಿನ ಪೋಲೀಸು
ನಿಂತರು ಸಲೀಸು
ಕಚ್ಚುತ ಹಲ್ಲು
ಕೇಸು ದಾಖಲ್ಲು!—
ಮಾಡಿದರಂದೇ, ಏನಚ್ಚರಿಯು! ಓಹೋ ಅಚ್ಚರಿಯು!
(ಓಂ, ಸಹನಾಭುನಕ್ತು,
ಸಹ ವೀರ್ಯಂಕರವಾವ ಹೈ)
ಯಾರೇನ ಮಾಡುವರು?
ಯಾರಿಂದಲೇನಹುದು?
ಕಳ್ಳ ಮಾಡಿದ ಕರ್ಮ—ಬಲವಂತ—ಹರಿಯೇ!
ಯಾರಿಗೆ ಯಾರುಂಟು?
ಎರವಿನ ಸಂಸಾರ........
ನೀರಮೇಲಣ ಗುಳ್ಳೆ
ನೀರಿನಲ್ಲಿಹುದೂ ಊ ಊ....
ದುನಿಯಾ ರಂಗ ರಂಗೀಲೇ ಬಾಬ, ದುನಿಯಾ ರಂಗರಂಗೀಲೆ.

— ಸವ್ಯಸಾಚಿ.

# ಮಾದರೀ ಸಂಭಾಷಣೆ

---

"ಏನ್ರೀ ಅದು? ಸೂಯಜ್ ಸೂಯಜ್ ಅಂತ ಎಲ್ರೂ ಬಡ್ಕೋತಿದಾರಲ್ಲಾ?"

"ಇದೇನ್ರೀ ಹೀಗ್ಕೇಳ್ತೀರಿ—ಸೂಯಜ್ ಅಂದ್ರೆ ಗೊತ್ತಿಲ್ವೆ?"

"ನನಗ್ಗೊತ್ತಿರೋದು ಒಂದೇ ಸೂಯಜು-ನಮ್ಮ ಮೈಸೂರಲ್ಲಿರೋ-ಏನದು?"

"ಅಯ್ಯೋ-ನಿಮ್ಮ ಬುದ್ಧೀಗೇ! ಮೈಸೂರಲ್ಲಿರೋ ಕಾಸ್‌ಬಂಗ್ಲೇಗೆ ಜೂಯಜ್ ಅಂತಾರ್ರೀ—ಸೂಯಜ್ ಅಂದ್ರೆ—ನೋಡಿ—ನನ್ನ ನಾಲಿಗೇ ಮೇಲೆ ಇದೆ!"

"ಹುಣ್ಣಾ?"

"ಅಲ್ಲ"

"ರಂಗೇ?"

"ಅಲ್ರೀ—ಥತ್!....ಹಾ—ಕಾಲುವೆ!"

"ಇರಬಹುದ್ರೀ—ಆದರೆ—ಆ ಕಾಲುವೇಗೆ ಇಷ್ಟು ಗಲಾಟೆಯೇನ್ರೀ??

"ಅಲ್ರೀ-ಕಾಲುವೇಗೆ ಇಷ್ಟು ಗಲಾಟೆಯೇ—ಅಂತೀರಲ್ಲಾ—ನಮ್ಮನೆ ಭಾವೀ ಹತ್ರ ದಿನಾಗ್ಲೂ ಆಗೋ ಗಲಾಟೇ ನೋಡಿದ್ದೀರಾ?"

"ಸರೀ—ನಂಗೆ ಹೇಳ್ತೀರಾ? ನಮ್ಮನೆ ಭಾವೀ ಹತ್ರ ಏನು ಕಮ್ಮಿ ಗಲಾಟೆಯಾಗುತ್ತೆ?"

"ಆದರೆ—ನಮ್ಮನೆ ಭಾವೀ ಹತ್ರ ಆಗೋ ಅಷ್ಟು ಗಲಾಟೆ ನಿಮ್ಮ ಭಾವೀಹತ್ರ ಆಗಲಾರದು!"

"ಬಿಡ್ರೀ— ಬಿಡ್ರೀ— ನಿಮ್ಮನೆ ಭಾವೀ ಹತ್ರ ಏನು ಮಹಾ ಗಲಾಟೆಯಾದೀತು?"

"ರಾಯರೇ-ಜಂಭಾ ಕೊಚ್ಕೋಬೇಡಿ-ನಮ್ಮನೇ ಭಾವೀನ ನೋಡಿದ್ದೀರಾ?"

"ಅಲ್ರೀ - ಅದು ಕಣ್ಣಿಗೆ ಕಾಣಿಸೋ ಅಷ್ಟು ದೊಡ್ಡಾಗಿದೆಯೇನ್ರಿ?"

"ಏನಂದ್ರಿ—ನಮ್ಮ ಭಾವಿ ದೊಡ್ಡದಲ್ಲಾಂದ್ರ?—ನಮ್ಮ ತಾತನ ಅಜ್ಜ ಸ್ವತಃ ಕಟ್ಟಿದ ಭಾವೀನ ದೊಡ್ಡದಲ್ಲಾಂತ ಹೇಳೋಕೆ ಎಷ್ಟ್ರೀ ನಿಮಗೆ ಪೊಗರು?"

"ಸುಮ್ನಿರ್ರಿ—ಏನೋ ಹೇಳ್ತಾರಲ್ಲಾ —ಹಾಗೆ ಮಾತಾಡ್ಬೇಡಿ"

"ಏನ್ರೀ—ಯಾರ್ರೀ—ಹೇಳೋರು ?"

"ನೀವು!"

"ಪುನಃ ಹೇಳಿ—ಹಲ್ಲುದುರಿಸಿ ಕೈಗೆ ಕೊಟ್ಟೇನು!"

"ನಿಮ್ಮ ಹಲ್ಲನ್ನ ದಯವಿಟ್ಟು ಒಳಗೆ ತಕೊಳ್ಳಿ—ನಾ ಜಾಸ್ತಿ ಉಸಿರು ಬಿಟ್ರೆ ಉದುರೀತು!"

"ಸಾಕಯ್ಯಾ ಮುಚ್ಚು!"

"ನೀ ಮುಚ್ಚು!"

"ನಿಂಗೇನೋ ಗ್ರಹಚಾರ ಒದಗಿದೇಂತ ಕಾಣುತ್ತೆ!"

"ಏನೋ ಅದು—ನಿನ್ನ ಆಟ?—ಚಂ..........!"

"ಬೋ.........."

"ಪೋಲೀಸ್! ಬರ್‍ರೀ—ಇವ—ಹೊಡೀತಾನೆ!"

"ಏನ್ರೀ ಅದು ಗಲಾಟೆ?"

"ಈತ ನಂಗೆ ಹೊಡೀತಾನೆ—ನೋಡ್ರೀ"

"ನಂದೇನು ತಪ್ಪಿಲ್ರೀ—ಇವನೇ ಜಗಳ ಶುರುಮಾಡಿದ್ದು!"

"ಯಾಕ್ರೀ ಜಗಳ ಶುರು ಆಯ್ತು?"

"ನಮ್ಮ ಭಾವೀಗೆ!"

"ಸುಳ್ಳು! ಭಾವಿಗಲ್ಲಾ! ಕಾಸ್‌ಬಂಗಲೇ ವಿಷಯಕ್ಕೆ!"

"ಸುಳ್ಳು—ಕಾಸ್‌ಬಂಗ್ಲೇಗಲ್ಲಾ! ನೋಡ್ರೀ—ಸೂಯಜ್ ಅಂತಾ ಹೇಳ್ತಾ ಇದಾರಲ್ಲಾ ಎಲ್ರೂ—ಆ ವಿಷಯದಲ್ಲೇ ನಮಗೆ ಜಗಳ ಶುರುವಾದದ್ದು!"

"ನಡೀರಿ—ನಡೀರಿ—ಪುನಃ ನೀವು ನನ್ನ ಕಣ್ಣಿಗೆ ಬಿದ್ರೆ—ಪಾಶೀಗ್ಹಾಕಿಸಿ ಬಿಡ್ತೀನೆ—ನಡೀರಿ—ಹೂ!"

— ಕೇಫ.

---

# ★ ಸ್ವಾತಂತ್ರ್ಯ ಗಾನ ★

ನವ್ಯಕವಿ! ನಾನೊಪ್ಪೆ! ತಪ್ಪೆ ತಿಪ್ಪೆ?
ಅರೆ ಇಸ್ಕಿ, ಬಹು ವ್ಹಿಸ್ಕಿ, ಮಲಿನೌಸ್ಕಿ, ಕಪಿಹಿಂಗು,
ಜಗವೆಲ್ಲ ಐಕಾಗಿ, ಅಣುರೇಣು, ಋಣಕಾಷ್ಠ, ಮಣಿರಂಗು,
ಏನುಮಾಡಿದರೇನು? ಎಳಗರುಗೆ ಬಸವತನ ನಾಸ್ತಿ ನಾಸ್ತಿ,
ಪಿಷ್ಟಮಾತ್ರದ ಊಟ ಸಾಲದೇನು?
ಭಕ್ರನಂಗಲ ನೀರು, ಭಕ್ರಗಳ ಹೀರು, ಘಟ್ಟೆ ನೀರು,
ಉಳಿತಾಯ ಗಳಿತಾಯ ದಲಿತಾಯ ಹೇರು
ತಿರುಪತಿಗೆ ಬಸ್ಸಾಯ್ತು, ಸೂಯೆಸ್ಸು ಮಿಸ್ಸಾಯ್ತು
ಅಂದಮಾನಕೆ ಜನವ ಕಳಿಸೆ ರಂಪ
ಜವಾಹರ್ ಜೀಪಿಗೂ ಬಂತು ಕಂಪ!
ಆ ಟೋಪಿ ಈ ಟೋಪಿ, ಕೊನೆಗೆ ತಂತಿಯಾ ಟೋಪಿ
ಜೈ ಹಿಂದೆ ಜೈ ಹಿಂದೆ ನಡೆ ಮುಂದೆ ಮುಂದೆ
ಟಿಂಪನಕೆ ಸಿಂಪತಿಯ ಸಿಂಪಿಸಲು ಬಲ್ಲವರು
ಕೆಂಪಿನವರೊಡಗೂಡಿ ಹಂಪೆ ಕೊಂಪೆ
ಬೀದಿ ರೋಮಿಯೊಗಳಿಲ್ಲ ಗಾದೆ ಮಾತು
ಬೂದಿ ನಾಯಿಯು ತೆರದಿ ಹಾದಿ ಕಾದು
ತಲೆ ಕೆಟ್ಟು ನೆಲೆ ತಪ್ಪಿ ಡಲ್ಲೆಸೇ ಗತಿ ಎಂದು
ಹಿರೊಷಿಮಾ ಹುಣ್ಣಿಗೆ ಬುಲ್ಗನೀ ವೈದ್ಯವೆ
ಕಾಲುವೆ ನೀರಿಗೆ ಕಾಲಕೆರೆತಮಾಡಿ
ಸಾಲವ ಕೊಡದೆ ಕಾಲನ ಕರೆದರೆ—
ಯಾರಿಗೇ ಎತ್ತಣದು, ಎತ್ತಿಗೋ ಗಾಣಕ್ಕೋ,
ಹೇಳಿರೀ, ಸ್ವಾತಂತ್ರ್ಯ? ಬಿಟ್ಟಿಕೊಡೆಯಾ!

— ಗುಡಿಗ.

— o —

# ಪ್ರಾಣೇಶ ಪ್ರಸಂಗ

"God gives us relatives; thank god we can choose our friends!"—ಎಂತಲೇ ಪ್ರಾಣೇಶ ಈ ಸಲ ತನ್ನ ಕಾಗದವನ್ನು ಪ್ರಾರಂಭಿಸಿದ್ದಾನೆ. ನಿಜವಾಗಿಯೂ ನವ ವಧೂವರರಿಗೆ ನೆಂಟರಿಷ್ಟರ 'ಕಾಟ' ಇದ್ದಿದ್ದೇ ಎಲ್ಲರಿಂದಲೂ ತಮ್ಮಲ್ಲಿಗೆ ಬಂದು ಹೋಗಬೇಕೆಂದು ವಧೂವರರಿಗೆ ಕರೆ. ನೆಂಟರಿಷ್ಟರೆಂದರೆ ಎಲ್ಲ ತರದವರೂ ಇರುತ್ತಾರೆ. ಆದರೂ ಅಲ್ಲಿಗೆ ಹೋಗುವುದು ಅಥವಾ ಬಿಡುವುದು ಹುಡುಗ ಹುಡುಗಿಯ ಇಷ್ಟವಲ್ಲ. ಅದೆಲ್ಲವೂ ಹಿರಿಯರ ನಿರ್ಣಯದ ಪ್ರಕಾರ. ಘಟ್ಟದ ಕೆಳಗಿನ ದೂರದ ತಾತಯ್ಯನವರೊಬ್ಬರು ತಮ್ಮಲ್ಲಿಗೆ ಬಂದೇ ತೀರಬೇಕೆಂದು ಒತ್ತಾಯಿಸಿದಾಗ ಪ್ರಾಣೇಶನಿಗೆ 'ಆಗೋದಿಲ್ಲ ಎನ್ನಲು ಮನಸ್ಸು ಬರಲಿಲ್ಲವಂತೆ (ಆಹ! ಎಷ್ಟು ಬೇಗನೆ ಸದ್ಗೃಹಸ್ಥನಾಗುತ್ತಿದ್ದಾನೆ ನಮ್ಮ ಪ್ರಾಣಿ!) ಸರಿ. ದಕ್ಷಿಣ ಕನ್ನಡಕ್ಕೆ ಹೋಗುವ ಸಂದರ್ಭ ಒಳ್ಳೆಯದೇ. ಕವಿಗಳೆಲ್ಲ ಒಂದೇ ಸಮನೆ ವರ್ಣಿಸುವ ಮಲೆನಾಡಿನ ಮೂಲಕ ಸಹ್ಯಾದ್ರಿಯನ್ನಿಳಿದು ಹೋಗುವ ಮಾರ್ಗ. ಆದರೇನು, ಎಲ್ಲಿಗೆ ಪ್ರಯಾಣ ಹೊರಟರೂ ಯಾರಾದರೂ ಜೊತೆಗೆ ಇದ್ದೇ ಇರುತ್ತಾರಲ್ಲಾ ಅಂತ ಆತಂಕ ಪ್ರಾಣೇಶನಿಗೆ. ಸತಿಪತಿಗಳಿಬ್ಬರೇ ಸರಸ ಸಲ್ಲಾಪಗೈಯುತ್ತಾ ಚೆಲ್ಲಾಟದಿಂದ ಪ್ರಯಾಣಮಾಡಲು ಅವಕಾಶವಿಲ್ಲವಲ್ಲ ಎಂದು ಜಿಗುಪ್ಸೆ. ಈ ಸಲ ಕೂಡ ತಾತಯ್ಯನವರು ಮತ್ತು ಅವರ ವೃದ್ಧ ಪತ್ನಿ ಬೇರೆ ಜೊತೆಗಿರುತ್ತಾರೆ. ಪ್ರಾಣೇಶನಿಗೆ ಯಾವ ಉಪಾಯವೂ ತೋಚದೆ ಆತ ಕಿಂಕರ್ತವ್ಯ ಮೂಢನಾಗಿದ್ದ. ಆದರೆ ಅವನ ಹೆಂಡತಿ ಸಮಸ್ಯೆಯನ್ನು ಬಗೆಹರಿಸಿಬಿಟ್ಟಿದ್ದಳು. ತಾತಯ್ಯನವರ ಮಗಳೊಬ್ಬಳು ಮಲೆನಾಡಿನ ಮೂಲೆಯಲ್ಲೆಲ್ಲೋ ಇದ್ದರಂತೆ. ಅವಳನ್ನು ನೋಡಬೇಕೆಂದು ಬಯಕೆಯಾಗುತ್ತದೆ; ಆಕೆ ಲಗ್ನಕ್ಕೂ ಬರಲಿಲ್ಲ— ಎಂದು ಉಪಾಯವಾಗಿ ಪುಂಗಿ ಊದಿದಳಂತೆ ಅದಕ್ಕೆ ತಾತಯ್ಯನವರು ತುಂಬ ಸಂತೋಷಪಟ್ಟು ತಾನು ಅವಳಲ್ಲಿಗೆ ಹೋಗಿ ಅವಳನ್ನು ತಮ್ಮೂರಿಗೆ ಒಯ್ಯುತ್ತೇನೆ ಎಂದರು. ತಾಯಿಯೂ ಮಗಳ ಊರಿಗೆ ಹೋಗದೆ ಸ್ವಲ್ಪ ಸಮಯವಾಗಿತ್ತು ಆದ್ದರಿಂದ ತಾನೂ ಗಂಡನ ಜೊತೆಗೆ ಹೋಗಿ ಮಗಳನ್ನು ಊರಿಗೆ ಕರೆದುಕೊಂಡು ಬರುವುದೆಂದು ನಿಶ್ಚಯಿಸಿದರು. ಅಷ್ಟರಲ್ಲಿ ಪ್ರಾಣೇಶ ಮತ್ತು ಅವನ ಹೆಂಡತಿ ಅವರೂರನ್ನು ತಲುಪಿದರೆ ಸರಿ. ಸ್ತ್ರೀ ಬುದ್ಧಿ ಇಷ್ಟರತನಕ ಓಡಬಹುದೆಂದು ತಾನೆಣಿಸಿರಲಿಲ್ಲ ಎನ್ನುತ್ತಾನೆ ಪ್ರಾಣೇಶ. ಅಂತೂ ಈ ಹಕ್ಕಿಗಳ ದಾರಿ ಸುಗಮವಾಯಿತು.

ಬೇರೆ ಯಾರೂ ಜೊತೆಗಿಲ್ಲದೆ ತಾವಿಬ್ಬರೇ ರೈಲು ಮೋಟಾರಿನಲ್ಲಿ ಪ್ರಯಾಣಮಾಡ ಬೇಕೆಂಬ ಇಷ್ಟಾರ್ಥ ಲಭಿಸಿತು.

ಶಿವಮೊಗ್ಗೆಯ ತನಕ ರೈಲಿನಲ್ಲಿ ಪ್ರಯಾಣ. ಶಿವಮೊಗ್ಗೆಯಲ್ಲಿದ್ದ ಒಬ್ಬ ಗೆಳತಿಯನ್ನು ನೋಡುವುದಕ್ಕಾಗಿ ಅಲ್ಲಿ ಒಂದು ದಿನ ಹಾಲ್ಟು. ಪ್ರಾಣೇಶನಿಗೆ ಇಷ್ಟವಿಲ್ಲದಿದ್ದರೂ ಆಕೆ ಬಿಡುವಹಾಗಿಲ್ಲ. ಕಮಂಗಿಯ ಹಾಗೆ ಆ ದಿನವೆಲ್ಲ ಅವಳ ಹಿಂದೆ ಸುತ್ತಾಡಬೇಕಾಯಿತು ಎಂದು ಗೋಗರೆಯುತ್ತಾನೆ ಪ್ರಾಣೇಶ. ಆದರೂ ತುಂಗಾ ತೀರದ ತಂಗಾಳಿ ಅವನನ್ನು ಮತ್ತ್ರಸನ್ನಾಗಿ ಮಾಡಿತಂತೆ! (ಮಾಡದೆ ಏನು!). ಆದರೆ ಆ ದಿನದ ಘಟನೆಗಳಲ್ಲಿ ಒಂದು ಮಾತ್ರ ಕೊಂಚ ನಾಚಿಕೆ ಗೇಡಾಯಿತಂತೆ. ಅದೇನೆಂದರೆ ಆಂಜನೇಯನ ಗುಡಿಯಲ್ಲಿ ಅರ್ಚಕರು ತೀರ್ಥ ಕೊಟ್ಟಾಗ ನಡೆದ ಅಚಾತುರ್ಯ. ತೀರ್ಥವೇನು, ಸೊಗಸಾದ ಸೀಕರಣೆ ಬಾಬ್ತು ಒಂದು ಉದ್ಧರಣೆ ಕೈಗೆ ಬಿತ್ತು. ಪ್ರಾಣಿ ಮೊದಲೆ ಗೊಡ್ಡದ ವಂಶದವನು! ಸಿಹಿ ಎಂದರೆ ಸತ್ತಲ್ಲಿಂದ ಎದ್ದು ಬರುತ್ತಾನೆ. ಹಾಗಾಗಿ ಸೀಕರಣೆಯನ್ನು ಪ್ರಾಮಾಣಿಕ ವಾದ ಪ್ರೀತಿಯಿಂದ ಆತ ಸವಿಯುವಾಗ ಎಚ್ಚರ ತಪ್ಪಿ ಕೊಂಚ ಹೆಚ್ಚು ಸದ್ದಾಯಿ ತಂತೆ. ತಲೆ ಎತ್ತಿದಾಗ ಹುಡುಗಿಯರು—ಹುಡುಗಿಯರೇನು, ಅಲ್ಲಿದ್ದವರೆಲ್ಲರೂ—ಕೊಂಚ ನಗುತ್ತಿರುವಂತೆ ಕಾಣಿಸಿತಂತೆ. ಸಿಹಿ ನನ್ನ weakness ಕಣಯ್ಯ—ನಗಬೇಡ ಎಂದು ಬರೆದಿದ್ದಾನೆ ಪ್ರಾಣೇಶ. ಇಲ್ಲ. ನಾನು ನಗುವುದಿಲ್ಲ!

ಸರಿ. ಮಾರನೆ ದಿನ ಆಗುಂಬೆಗೆ ಹೋಗುವ ಬಸ್ಸನ್ನು ಹತ್ತಿದರು. ಬೆಳಗ್ಗೆ ಅಷ್ಟುಹೊತ್ತಿಗೆ ಬಸ್ಸು ತೀರ್ಥಹಳ್ಳಿ ರೋಡಿನಲ್ಲಿ ಸಾಲು ಮರಗಳ ನಡುವೆ ಸಾಗು ತ್ತಿರುವಾಗ ತಂಗಾಳಿ ಕೊಂಚ ಚಳಿಚಳಿಯಾಗಿ ಬೀಸಿದರೂ ಆಗ ದೊರೆಯುವ ಸುಖಾನುಭವ ವರ್ಣನಾತೀತವಾದದ್ದು. ಪ್ರಾಣೇಶನೂ ತಾನು ತಂದಿದ್ದ ಕವನ ಗ್ರಂಥವನ್ನು ತೆರೆದು "ನಾಕವೆ ಬುವಿಗೈ ತಂದಿಹುದು" ಎಂದು ಮುಂತಾಗಿ ಎರಡು ಸಾಲು ಓದಿಯೇಬಿಟ್ಟ. ಅವನ ಸ್ವರ ಅಷ್ಟೇನೂ ಸೊಗಸಲ್ಲ ಎಂದರೆ ಅದು ಕೇಳುವ ವರ ಅಭಿಪ್ರಾಯ ಎನ್ನುತ್ತಾನೆ ಆತ. ಆದರೆ ಕೊನೆಗೆ ತನ್ನ ಹೆಂಡತಿ ಕನ್ನಡ ಕವನ ಗಳನ್ನು ಬಲು ಸೊಗಸಾಗಿ ಹಾಡಬಲ್ಲಳೆಂದು ಗೊತ್ತಾದಾಗ ಅವನಿಗೆ ಕೊಂಚ 'shock' ಆಯಿತಂತೆ. ಹಾಗಂದರೇನೋ,

ಬಸ್ಸು ಮಂಡಗದ್ದೆಗೆ ಬರುವವರೆಗೂ ಇಬ್ಬರೂ ಬೇರೆಯವರಿದ್ದಾರೆಂದು ಪರಿವೆ ಯಿಲ್ಲದೆ ಚೆನ್ನಾಗಿ ಹರಟಿದರಂತೆ. ಆದರೆ ಅಲ್ಲಿ ಒಂದು ಲಿಂಬೆಹಣ್ಣು ತರಲು ಅಪ್ಪಣೆಯಾಯಿತಂತೆ. ಯಾತಕ್ಕೆಂದು ಕೇಳಲು ಪೆಟ್ರೋಲು ವಾಸನೆ ನನಗೆ ಆಗೋದಿಲ್ಲ ಎಂಬ ಉತ್ತರ ಬಂತು. ಸರಿ, ಮುಂದೆ ಆ ಲಿಂಬೆಹಣ್ಣನ್ನು ಮೂಗಿನ ಸುತ್ತ ಆಡಿಸುತ್ತ ಕುಳಿತುಕೊಂಡಳು. ಎಳೆ ಬಿಸಿಲು ಬಿದ್ದಂತೆ ಈತನ ಕಾವ್ಯಾವೇಶ ಬಲಿಯಿತು. ಆದರೆ ಆಕೆಯ ಮುಖಕ್ಕೆ ಗ್ರಹಣ ಹಿಡಿಯುತ್ತಾ ಬಂತು. ಕುವೆಂಪು

ರವರ ನಾಡು ಸಮೀಪಿಸಿದ ಹಾಗೆ ಅಗೋ ನೋಡು ಕಾಜಾಣ, ಅಗೋ ಅಲ್ಲಿ ಕೋಗಿಲೆ, ಅಗೋ ಅಲ್ಲಿ ಕಾಮಳ್ಳಿ, ಅಗೋ ನವಿಲು ಎಂದೆಲ್ಲ ಸಿಕ್ಕಿದ ಹಕ್ಕಿಗಳನ್ನು ತೋರಿಸಿ ಎಗರಾಡಿದ ಪ್ರಾಣೇಶ. (ನನಗೆ ತಿಳಿದ ಮಟ್ಟಿಗೆ ಈತ ಕಾಗೆಯನ್ನು ಮಾತ್ರ ಗುರುತಿಸಬಲ್ಲ). ಆಕೆ ಜಿಗುಪ್ಸೆಗೊಂಡು ಹೂಗುಟ್ಟಿದಳು ಮಾತ್ರ. ನಡು ನಡುವೆ ಬಾಯಿಗೆ ಬರುತ್ತಿದ್ದ ಪಿತ್ಥದ ನೀರನ್ನು ಉಗುಳಿದಳು. ಅಷ್ಟರಲ್ಲಿ ತೀರ್ಥ ಹಳ್ಳಿ ಬಂತು. ಆಕೆ ಬೇಡವೆಂದರೂ ಇವನು ಬಲವಂತದಿಂದ ಇಡ್ಲಿ ಕಾಫಿ ತಿನ್ನಿಸಿದ. ಆಕೆಗೂ ಕೊಬ್ಬರಿ ಚಟ್ನಿಯ ಚಪಲ. ಅಂತೂ ಭೈಷಜ ಸರಿಹೋಯಿತು. ಬಸ್ಸು ಹೊರಡುವತನಕ ಕಾಫಿ ಇಡ್ಲಿಯ ಉಲ್ಲಾಸ ಮೆರೆಯಿತು. ಬಸ್ಸು ಹೊರಟ ಮೇಲೆ ಅನಾಹುತ! ಲಿಂಬೆಹಣ್ಣಿನ ಕೈಸೋತಿತು. ಅಗೋ "ವಿಹಂಗದಂಪತಿ ತರುಶಾಖಾ ಗ್ರದಿ...." ಎಂದು ಈತ ರಾಗವೆತ್ತಿದರೆ, ಆಕೆ ಬಾಡಿ ಬೆಂಡಾಗಿ "ನೀವು ಈಕಡೆ ಬನ್ನಿ, ನಾನು ಬದಿಯಲ್ಲಿ ಕುಳಿತುಕೊಳ್ಳುತ್ತೇನೆ" ಎನ್ನುತ್ತಾಳೆ. ಆಗ ಪ್ರಾಣೇಶ ಕೊಂಚ ಗಾಬರಿಗೊಂಡು "ಏನು ತಲೆ ಸುತ್ತಾ ಇದೆಯೇನೆ?" ಎನ್ನುತ್ತಾನೆ. "ನೀವು ಕೊಂಚ ಸುಮ್ನಿರಿ"—ಎಂದು ಆಕೆ ಅವನ ತೊಡೆಯ ಮೇಲೆ ಮಲಗಿಬಿಡುತ್ತಾಳೆ. ಅದು ಒಂದು ಕ್ಷಣ. ಆಕೆ ಥಟ್ಟನೆ ಎದ್ದು ತಲೆ ಹೊರಗೆ ಹಾಕಿ first instalment ಮುಗಿಸಿದಳು. ಮತ್ತೊಮ್ಮೆ ಕುಸಿದಳು. ಪ್ರಾಣೇಶ ಕಕ್ಕಾಬಿಕ್ಕಿಯಾಗಿ ಚೌಕ ತೆಗೆದುಕೊಂಡು ಅವಳ ಬಾಯಿ ಜೊಲ್ಲು ಒರೆಸಿದ. ಅವನ ಕಾವ್ಯಾವೇಶ ಬತ್ತತೊಡಗಿತು. ಬಸ್ಸು ಹೊಲಸಾದರೆ ತೊಳೆದುಕೊಡಬೇಕಾಗುತ್ತದೆಂದು ಕಂಡಕ್ಟರ್ ಗಾಳಿಯನ್ನುದ್ದೇಶಿಸಿ ಹೇಳಿದರೂ ಅದು ಪ್ರಾಣೇಶನ ಕಿವಿಗೆ ಬಿತ್ತು. ಆತ ಹಿಂದಿರುಗಿ ಕೂಡ ನೋಡಲಿಲ್ಲ. ತಿರುಗಿ ನೋಡಿದ್ದರೆ ಸೀರ್ಪನಿಯನ್ನನುಭವಿಸಿದ, ಉಳಿದ ಪ್ರಯಾಣಿಕರ ಕಠೋರ ದೃಷ್ಟಿಗಳಿಗೆ ಅವನು ಬಲಿಯಾಗಬೇಕಾಗುತ್ತಿತ್ತು. ಬಸ್ಸಿನಲ್ಲಿ ನಲ್ಲಿದ್ದ ಮುದುಕಮ್ಮ ಒಬ್ಬರು ಲಿಂಬೆಹಣ್ಣನ್ನು ಕಚ್ಚಿ ತಿನ್ನಮ್ಮ ಎಂದು ಸಲಹೆ ಕೊಟ್ಟರು. ಹಾಗೆ ಮಾಡಿದರೂ ಆಗುಂಬೆ ತಲಪುವಾಗ ಇನ್ನೆರಡು ಸಲ ವಾಂತಿ ಯಾಯಿತು. ಪ್ರಾಣೇಶನ ಪಂಚೆಗೂ ಸ್ವಲ್ಪ ಬಿತ್ತು. ಈಗ ನರಕವೆ ಬುವಿಗಿಳಿ ದಂತನ್ನಿಸಿತ್ತು. ಆಕೆಯ ಮುಖ ನೋಡಿದರೋ ಆಕೆಯದಲ್ಲವೊ ಎಂಬ ಹಾಗಾಗಿತ್ತು. ಆಗುಂಬೆಯಲ್ಲಿ ಹೊಲಸು ಬಟ್ಟೆ ಬದಲಾಯಿಸುವಾಗ ಸಾಕಪ್ಪ ಜನ್ಮ ಅನ್ನಿಸಿತಂತೆ ಪ್ರಾಣಿಗೆ. ಆಕೆಯಂತೂ ಅಲ್ಲಿಯೇ ಬೆಡ್ಡಿಂಗ್ ಮೇಲೆಯೇ ಒರಗಿಬಿಟ್ಟಳಂತೆ. ಆ ಸ್ಥಿತಿಯಲ್ಲಿ ಆಗುಂಬೆಯಲ್ಲಿ ನಿಲ್ಲುವುದೇನು. sunset ನೋಡುವುದೇನು ಸಧ್ಯ ತಾತಯ್ಯನ ಊರು ತಲುಪಿದರೆ ಸಾಕು ಎನ್ನಿಸಿತಂತೆ. ಕೊನೆಗೆ ಟ್ಯಾಕ್ಸಿಯಲ್ಲಿ ಕುಳಿತು ಸಹ್ಯಾದ್ರಿ ಶಿಖರದಿಂದಿಳಿಯುವಾಗ ಇಕ್ಕಡೆಯ ದೃಶ್ಯಗಳಿಗೆ ಮನಸೋತು ಆಕೆಯೂ ಅವನ್ನು ನೋಡಿಯಾಳೇ ಎಂಬ ಆಸೆಯಿಂದ 'ಸರಳಾ', 'ಸರೂ' ಎಂದು ಮುಟ್ಟಿದರೆ ಆಕೆ ಮುದುಡಿದಲ್ಲೇ ನರಳುತ್ತಾ 'ಗಂಟಲೆಲ್ಲ ಮುಳ್ಳುಮುಳ್ಳು', 'ರೆರಿ ಬಲ್ ತಲ ನೋವು' ಎಂದೆಲ್ಲಾ ಗೊಣಗಿದಳೇ ಹೊರತು ತಲೆ ಬೇರೆ ಎತ್ತಿ ನೋಡ

ಲಿಲ್ಲ  ಜೊತೆಯಲ್ಲಿ ಬೇರೆ ಯಾರೂ ಇಲ್ಲದೆ ಸುಖವಾಗಿ ಪ್ರಯಾಣ ಮಾಡಬೇಕೆಂದು ಕೊಂಡರೆ ಹೀಗಾಯ್ತು ನಮ್ಮ ಅವಸ್ಥೆ; ಸದ್ಯ ಜೀವಂತವಾಗಿ ತಾತಯ್ಯನ ಊರು ತಲುಪಿದ್ದೇ ಒಂದು ಪುಣ್ಯ" ಎಂದು ಬರೆದಿದ್ದಾನೆ ಪ್ರಾಣೇಶ.

"Cheerio ಪ್ರಾಣಿ! ಈ ಸಲವೇನೋ ಹೀಗಾಯಿತು, ಮುಂದೆ ಎಷ್ಟೋ ನಿನ್ನ ಆಸೆ ಕೈಗೂಡುತ್ತದೆ.  ಈ ಸಲ ಆ ಮುದುಕ ಮುದುಕಿಗೆ ಮಂಕುಬೂದಿ ಎರಚಿ ಹೊರಟ ಪಾಪಕ್ಕೆ ಈ ಪ್ರಾಯಶ್ಚಿತ್ತ ದೊರಕಿರಬೇಕು.  ಇನ್ನು ಹಾಗಾಗಲಾರದು" ಎಂದು ಬರೆದಿದ್ದೇನೆ.

ಪ್ರಾಣೇಶ ಅದನ್ನೋದಿ "ತಾಳು ನಿನಗಿದೆ ಹಬ್ಬ"—ಎಂದು ಉಗುರು ಕಡಿದಿರಬೇಕು.

—ರಾಮಿ.

---



ಎರಡನೇ ಪಾಂಚವಾರ್ಷಿಕ ಯೋಜನೆಗೆ ನಮ್ಮನ್ನೂ ಹಿಡಿದು ಹಾಕ್ತಾರಂತಲ್ಲಾ ! !

# ಮ್ಯಾಂಗ ನೀ ಶೋಧನೆ

[ಮ್ಯಾಂಗನೀಸ್ ವಹಿವಾಟಿಗೆ ಕೈಹಾಕಿದ ಕುಚೇಲರು ಹಠಾತ್ತಾಗಿ ಕುಬೇರ ರಾದುದನ್ನು ಕಂಡು ಸಮತಾತತ್ವದ ಸರಕಾರ ಮ್ಯಾಂಗನೀಸ್ ವ್ಯಾಪಾರವನ್ನು ರಾಷ್ಟ್ರೀಕರಣ ಮಾಡುತ್ತೆಂದು ವರದಿ. ಇದನ್ನು ಕೇಳಿದ ನವ ಕುಬೇರನೊಬ್ಬ ಇಂತು ಹಾಡಿದನಂತೆ—]

ಮ್ಯಾಂಗನೀಸಿಗೆ ಹೋದೆ
ಮಂದಿಯೊಳು ಒಂದಾದೆ
ಹೆಬ್ಬುಲಿಯು ಬಾಯಂತೆ ಘೋರವಾಯ್ತು
ತಬ್ಬಲಿಯು ಹಸಿವಂತೆ ಬೆಳೆದು ಬಂತು
ನನ್ನ ಹಣದಾ ಆಶೆ !

ನಿನ್ನ ಬಿಗಿ ಹಿಡಿದಿರುವೆ
ನನ್ನೊಲುಮೆ ಲೋಹ
ಊರೊಳಗೆ ಬಿದ್ದಂತೆ
ಹಳ್ಳಿಯುವ ಕೆಟ್ಟು
ಆಸೆ ತುಳಿವುದು ಮ್ಯಾಂಗ
ನೀಸೆದೆಯ ಮೆಟ್ಟಿ !

ಹಗಲು ಇರುಳೂ ನಿನ್ನ
ಶೋಧಿಸುತಲಿರಲು
ಕರ್ಮ ಶಿಲಾತ್ಮ ಸರ್ಕಾರವೂ
ನನದೆಂದಿತು
ಕೈಬಾಚಿ ಮ್ಯಾಂಗನೀಸ
ದೋಚಿಬಿಡ್ತು !

ನಾವು ಮಾಡಿದ ಕರ್ಮ !
ನಮ ಸರ್ಕಾರ ! !
ನಾವು ಗೈದುದು ಎಲ್ಲಾ
ಫಲ ಬಿಡುತಲಿರಲು
ಕೈಬಾಚಿ ದೋಚುವುದು
ಶೂನ್ಯ ! ಇನ್ನುಂದೆ ಅಹಂಕಾರ !

— ಬಚ್ಚ.

# ಮಧ್ಯಂತರ ಕವಿಜೀವನ ವಿಚಾರ

**(ದೇವರಾಯ: ಅನಾಸಕ್ತ ವಿಮರ್ಶಕ; ಕವಿ)**

---

ಈ ಹಿಂದೆ ನಾವು ಸ್ವಂತ ತಾಪತ್ರಯಗಳ ದೆಸೆಯಿಂದ ನಮ್ಮ ಕವಿಜೀವನ ವಿಚಾರ ಪ್ರಬಂಧಮಾಲಿಕೆಯನ್ನು ಕೊನೆಗೊಳಿಸಿದೆವಷ್ಟೆ. ಅಂದಿನಿಂದ ನಮ್ಮ ತಾಪತ್ರಯಗಳು ಹೆಚ್ಚುತ್ತಲೇ ಬಂದಿವೆ. ಇರಲಿ. ಆದರೆ ಅತ್ಯವಶ್ಯಕವಾದ ಕವಿಜೀವನ ಸಂಶೋಧನೆಯ ಬಗೆಗೆ ಇನ್ನಾರೂ ಗಮನ ಕೊಡದೆ ಹೋದುದರಿಂದಲೂ, ಈ ಕಾರ್ಯವನ್ನು ನಿರ್ವಹಿಸುವ ಶಕ್ತಿ ನಮ್ಮಲ್ಲಿ ಅಲ್ಲದೆ ಬೇರೆಯವರಲ್ಲಿರುವುದು ಶಂಕಾಸ್ಪದವಾದುದರಿಂದಲೂ ನಾವೀಗ ಮಧ್ಯಂತರ ಕವಿಜೀವನ ವಿಚಾರದಲ್ಲಿ ತೊಡಗಿದ್ದೇವೆ.

ಪ್ರಾಚೀನ ಕವಿಗಳ ನಂತರ ಮಧ್ಯಂತರ ಕವಿಗಳು ಬಂದುಹೋದರು. ಅವರು ಆಧುನಿಕರಲ್ಲ ಎಂಬುದನ್ನು ಗಮನಿಸಿ. ಹದಿನಾಲ್ಕನೆಯ ಶತಮಾನದ ಅಂತ್ಯದಿಂದ ಆರಂಭವಾದ ಈ ಕಾಲ ಹತ್ತೊಂಬತ್ತನೆಯ ಶತಮಾನದ ಅಂತ್ಯದವರಿಗೆ ಹಬ್ಬಿದೆ. ಈ ಕಾಲದಲ್ಲಿ ಸಾವಿರಾರು ಕವಿಗಳು ಆಗಿಹೋದರು. ಕೆಲವರು ಹೆಸರಿಗೆ ಮಾತ್ರ ಇದ್ದರೆ ಇನ್ನು ಕೆಲವರು ಉದ್ದ ಗ್ರಂಥಗಳನ್ನು ಬರೆದಿದ್ದಾರೆ. ಸಾವಿರಾರು ಕವಿಗಳೆಲ್ಲರೂ ಕವಿಗಳಲ್ಲ. ಆದರೆ ಅವರೆಲ್ಲರೂ ಮನುಷ್ಯರು ಎಂದು ನಂಬಲು ಪ್ರಬಲವಾದ ಕಾರಣಗಳಿವೆ. ಆದರೆ ಅವರಲ್ಲನೇಕರು ಏಕೆ ಗ್ರಂಥರಚನೆ ಮಾಡಿದರು ಎಂಬ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟವೇ ಸರಿ.

ಈ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಬೆಳೆದು ಅಳಿದುಹೋಯ್ತು. ಮೈಸೂರರಸರ ಕೈಕೆಳಗೆ ಗ್ರಂಥರಚನೆಯಾಯ್ತು. ಭಕ್ತರು ವಿರಕ್ತರು ಅಂದರೆ ವೇಷಧಾರಿಗಳು, ನೀತಿ ಗ್ರಂಥ ರಾಶಿ ನಿರ್ಮಾಣ ಮಾಡಿದರು. ಬೆಳೆಯೇನೋ ಹುಲುಸಾಗಿದೆ ಆದರೆ ಕಾಳಿಲ್ಲಾ ಜೊಳ್ಳು. ವಿಜಯನಗರದ ಹಾಳು ನೋಡಿದ್ದಿರಲ್ಲವೇ. ಅಲ್ಲೊಂದು ಕಮಲ ಮಹಲು, ಇಲ್ಲೊಂದು ವಿಠ್ಠಲನ ಗುಡಿ, ಮಧ್ಯದಲ್ಲಿ ಶ್ರೀ ವಿರೂಪಾಕ್ಷೇಶ್ವರ ಸುತ್ತಮುತ್ತಲೆಲ್ಲಾ ಗೋಳು, ಹಾಳು. ಹಾಗೆ ಇದೆ ಈ ಕಾಲದ ಸಾಹಿತ್ಯ.

ಹದಿನಾಲ್ಕನೆಯ ಶತಮಾನದ ಅಂತ್ಯದಲ್ಲಿದ್ದ ಪುಟ್ಟಣಾಂಕ ಪಂಡಿತನೆಂಬ ಕವಿ ದೇವರ ದಯೆಯಿಂದ ಯಾವ ಗ್ರಂಥಗಳನ್ನೂ ಬರೆಯಲಿಲ್ಲ. ಆದರೆ ಇವನ

ಶಿಷ್ಯ ಕವಿಮಲ್ಲ 'ಮನ್ಮಥ ವಿಜಯು' ಎಂಬ ಪ್ರಚೋದಕ ಗ್ರಂಥ ಬರೆದು ಆ ಕಾಲದ ಪ್ರಗತಿಶೀಲನಾದವನು.

ಸುಮಾರು ಇದೇ ಕಾಲದಲ್ಲಿ ಅಭಿನವ ಮಂಗನೆಂಬ ಕವಿ ಇದ್ದನೆಂದು ಕವಿ ಚರಿತಕಾರರು ಹೇಳುತ್ತಾರೆ. ಈ ಅಭಿನವಮಂಗನಿಗೆ 'ಸೋಮೇಶನು ಒಲಿದಿತ್ತನು ಅನಾಹುತ ಮತಿಯು'. ಈ ನಿಘಂಟುಕಾರರು ಕ್ರಿಸ್ತಾಬ್ದ 1398ರಲ್ಲಿ ಬದುಕಿದ್ದನೆಂದೂ ಅವರು ಹೇಳುತ್ತಾರೆ. ಇದು ನಂಬಲರ್ಹವಾಗಿಲ್ಲ. ಅಭಿನವಮಂಗನು ತನ್ನ ಪದ್ಯ ಒಂದರಲ್ಲಿ 'ವರ ವೈಜಯಂತಿಯುನಯಂ' ಎಂದು ಹೇಳಿದ್ದಾನೆ. ಇದರ ಅರ್ಥ ಸುಸ್ಪಷ್ಟವಿದೆ. 'ವೈಜಯಂತಿ' ಎಂದರೆ 'ನಾಗಿನ್' 'ಪಹೆಲೀ ಝುಲಕ್'' ಚಿತ್ರಗಳ ನಾಯಕಿಯೆಂದು ಪ್ರಾಥಮಿಕಶಾಲೆಯ ಹುಡುಗರಿಗೂ ತಿಳಿದಿರಲು ಅದು ಕವಿಚರಿತ ಕಾರರಿಗೆ ತಿಳಿಯದಿರುವುದು ಅಶ್ಚರ್ಯವೇ ಸರಿ. ಕವಿಚರಿತಕಾರರು ನಮ್ಮ ಸಮಕಾಲೀನ ರಲ್ಲದಿರುವುದೇ ಇದಕ್ಕೆ ಕಾರಣವಿರಬೇಕು. ಅಂತೂ ಅಭಿನವಮಂಗ ಈಗಿನ ಕವಿ. ಸು. 1400ರಲ್ಲಿದ್ದ ಅಭಿನವ ಚಂದ್ರನೆಂಬ ಕವಿಯು ಅಶ್ವವೈದ್ಯಗ್ರಂಥವನ್ನು ಬರೆದನು, ಈ ಅಭಿನವಚಂದ್ರನು ನಿಷ್ಣಾತ ಅಶ್ವವೈದ್ಯನಿದ್ದನು. ಈತನು ಕುದುರೆಗಳ ಚಿಂತೆ ಯಲ್ಲೇ ಕಾಲ ಕಳೆದು (ಹಯತಾದಾತ್ಮ್ಯ)ವನ್ನು ಪಡೆದನು. ಮೊದಲು ಮೊದಲು ಇವನಿಗೆ ತಾನು ಮನುಷ್ಯ, ವಿಪ್ರ ಕುಲದವ, ಹಯಶಾಸ್ತ್ರವಿಶಾರದ ಎಂದೂ ತಾನು ಕುದುರೆಗಳ ರೋಗ ಪರಿಹಾರಮಾಡುತ್ತೇನೆ ಎಂದೂ ಅರಿವಿತ್ತು. ಇವನು ಬಹಳ ಸುಖದಿಂದ ಜೀವಿಸಿರಬೇಕು. ಕಾರಣ ಇದು—ಕುದುರೆಗಳಿಗೆ ಭಿಕ್ಷಶೂಲೆ ಎಂಬ ರೋಗ ಬರುತ್ತದೆ. ಅದನ್ನು ಕವಿ ಸುಭಿಕ್ಷ ಶೂಲೆ ಎಂದು ವರ್ಣಿಸುತ್ತಾನೆ.

ಮೊದಲು ಸುಖದಿಂದ ಜೀವಿಸಿದ್ದರೂ ಜೀವಮಾನದ ಕೊನೆಯಲ್ಲಿ ತಾನೇ ಕುದುರೆ ಎಂಬ horse complex ಇವನಿಗೆ ಬಂತು. ಆಗ ಆದ ಸ್ಥಿತಿಯನ್ನು, ಅವನ ಗತಿಯನ್ನು ಕವಿ ಹೀಗೆ ಹೇಳಿದ್ದಾನೆ.

ಬಾಲಂ ಬೀಸದು ನುಡಿಗಳ | ನಾಲಿಸದಾಹಾರ ಚಿಂತೆಗೈಯದು ಕಿವಿಗಳ್
ಕೀಲಿಸೆ ಕಂಪಿಸೆ ಜಾನಿಸೆ | ಕಾಲಮುಖಪ್ರಾಪ್ತಿಯಕ್ಕುಮಭಿನವ ಚಂದ್ರಾ

ಮೊದಲಿನ ಮೂರು ಪಾದಗಳಲ್ಲಾದಂತೆ ಕುದುರೆಯಾಗಲು, ಅಭಿನವಚಂದ್ರನು ಕಾಲನ ಮುಖಕ್ಕೆ ಹೋಗುತ್ತಾನೆ ಎಂಬುದೇ ಅರ್ಥ. ಹಾಗೆಯೇ ಹೋಗಿರಲಿಕ್ಕೆ ಸಾಕು.

## ಪ್ರೌಢ ದೇವರಾಯ (1419—1446)

ನಾವಿನ್ನು ವಿಜಯನಗರದ ರಜತಸೀಮೆಗೆ ಬರುತ್ತೇವೆ. ಕರ್ಣಾಟಕ ಸಾಮ್ರಾಟನಾಗಿ ದೇವರಾಯ ಆಳುತ್ತಿದ್ದಾನೆ. ಆಗ ಇಟಲಿಯಿಂದ ನಿಕೊಲೋ ಕಾಂಟಿ ಬಂದಿದಾನೆ. ಅವನು ಹೇಳುತ್ತಾನೆ ಕೇಳಿ-"ಇಂತಹ ನಗರ ಹಿಂದೆ ಇರಲಿಲ್ಲ.

ಮುಂದೆ ಒರುವುದಿಲ್ಲ. ಇಲ್ಲಿಯ ರಾಜನ ಮುಝುವೇ ಮುಝು ಇವನು ನಲವತ್ತು ಸಾವಿರ ಆನೆಗಳನ್ನೂ, ಎರಡು ಲಕ್ಷ ಕುದುರೆಗಳನ್ನೂ, ಮೂರು ಲಕ್ಷ ಕವಿಗಳನ್ನೂ ಸಾಕಿದ್ದಾನೆ”

ಮೂರು ಲಕ್ಷ ಕವಿಗಳು ದೇವರಾಯನ ಆಸ್ಥಾನದ ಲಾಯಗಳಲ್ಲಿ ಇದ್ದರೆಂದರೆ ಆ ಗಮ್ಮತ್ತು ಹೇಗಿರಬೇಕು. ಅವರವರಲ್ಲಿ ಎಂತೆಂತಹ ವಾಗ್ಯುದ್ಧಗಳಾಗಿರಬೇಕು? ತಲೆಗಳು ಎಷ್ಟುರಮಟ್ಟಿಗೆ ತಿರುಗಿರಬೇಕು? ಅದನ್ನೂ ಸಹಿಸುವ ಶಕ್ತಿ ದೇವರಾಯನಿಗೆ ಹೇಗೆ ಬಂದಿದ್ದೀತು?

ಈ ಬಗ್ಗೆ ನಮ್ಮದೊಂದು ಸಂಶೋಧನವಿದೆ. ನಮ್ಮ ಅಭಿಪ್ರಾಯದಂತೆ ದೇವರಾಯನು ಅನಾಸಕ್ತಯೋಗಿಯಿರಬೇಕು. ಎರಡನೆಯದಾಗಿ ವಿಮರ್ಶೆಯ ಮೂಲವನ್ನವನು ತಿಳಿದಿದ್ದನೆಂಬುದು ಖಚಿತ. ಮೂರನೆಯದಾಗಿ ಆಧುನಿಕ ಕರ್ಣಾಟಕದ ಹಾಗೂ ಕರ್ಣಾಟಕೇತರ ವಿಶ್ವವಿದ್ಯಾನಿಲಯಗಳು ಇಂದು ಕಂಡು ಹಿಡಿದಿರುವ ತತ್ವ ಅಂದೇ ಅವನಿಗೆ ತಿಳಿದುಬಿಟ್ಟಿತ್ತು.

ಇನ್ನು ಮೇಲ್ಕಂಡ ಹೇಳಿಕೆಗಳನ್ನು ಪರೀಕ್ಷಿಸೋಣ. ದೇವರಾಯನು ಅನಾಸಕ್ತ ಎಂದರೆ ತನ್ನ ರಾಜ್ಯಭಾರ ಹಾಗೂ ತನ್ನ ಸ್ವಂತ ಕಾವ್ಯಗಳ ಹೊರತು ಅವನಿಗೆ ಇನ್ನಾವುದರಲ್ಲೂ ಆಸಕ್ತಿ ಇರಲಿಲ್ಲ. ತಾನೇ ಸ್ವತಃ ಕವಿಯಾದುದರಿಂದ ತನ್ನ ಯೋಗ್ಯತೆ ಅವನಿಗೆ ತಿಳಿದಿತ್ತು. ದೇವರ ದಯೆಯಿಂದ ರಾಜ್ಯ ಸಿಕ್ಕಿತ್ತು. ಆದರೆ ಬೇರೆಯ ಕವಿಗಳಿಗೆ ಆ ಸೌಲತ್ತು ಇಲ್ಲ. ಆದುದರಿಂದ ತನ್ನ ಸಹೋದ್ಯೋಗಿಗಳಿಗೆ ತಾನಲ್ಲದೇ ಇನ್ನಾರು ಗತಿ ಎಂದು ಅವರನ್ನು ಸಾಕಿದ್ದನು.

ಎರಡನೆಯದಾಗಿ ಇಂದು ವಿಶ್ವವಿದ್ಯಾನಿಲಯಗಳಲ್ಲಿ Ph.D. ಗಳು ಎಷ್ಟು ಸುಲಭ ನೋಡಿ. ಏನುಬರೆದರೂ ಬರೆಯದಿದ್ದರೂ Ph.D. ಕವಿಗಳಿಗೆ D.Sc. ಬಿರುದು ವಿಜ್ಞಾನಿಗಳು ಅರಾಜಕಾರಣಿಗಳು D.Littಗಳು. ‘ಲುಂಗಿ ಒಗೆಯುವುದಕ್ಕೂ ಧೋತಿ ಸೀರೆಗಳನ್ನೊಗೆಯುವುದಕ್ಕೂ ಇರುವ ವ್ಯತ್ಯಾಸಗಳು’ ಎಂದೊಂದು ಗ್ರಂಥವನ್ನು ಅಗಸರ ಮಾಳವ್ವ ಬರೆದರೆ ನಾಡಿದು ಅವಳು Dr. ಮಾಳವ್ವ Ph.D. ಆದರೆ ಸೋಜಿಗವೇನೂ ಇಲ್ಲ. ನಮ್ಮ ದೇಶದಲ್ಲಿ ಅಲ್ಲದಿದ್ದರೆ ಪರದೇಶಗಳಲ್ಲಿ ಕೊಡುತ್ತಾರೆ Ph.Dಯನ್ನು.

ಈ ರಹಸ್ಯ ದೇವರಾಯನಿಗೆ ಗೊತ್ತು. ಅವನು ತನ್ನ ಆಸ್ಥಾನದಲ್ಲಿದ್ದ ೧೮೧ ವಿರಕ್ತರಿಗೂ, ೨೧ ಬ್ರಾಹ್ಮಣರಿಗೂ ಕೊನೆಯಪಕ್ಷ ೧ ಜೈನರಿಗೂ Ph.D. ದಯಪಾಲಿಸಿದ್ದ. ಅವನ ಆಸ್ಥಾನದಲ್ಲಿ ‘ತಂಡ ತಂಡದ ವಾದಿ ವಿದ್ವಾಂಸುಗಳು’ ಇದ್ದರಂತೆ. ವಾದದಲ್ಲಿ ಗೆಲ್ಲಲಿ ಬಿಡಲಿ ಅವರಿಗೊಂದು Ph.D. ಆ ಕಾಲದಲ್ಲಿ ಎಲ್ಲರೂ ದೇವರಾಯ ಆಸ್ಥಾನದಲ್ಲಿ ವಾದದಲ್ಲಿ ಗೆದ್ದರೆಂದು ದಾಖಲೆಗಳಿವೆ. ಯಾರನ್ನು

ಗೆದ್ದರೋ ಶಿವನೇ ಬಲ್ಲ. ದೇವರಾಯನಿಗಂತೂ ತಿಳಿಯದು. ಬರೀ ಕನ್ನಡಿಗರೇ ಅಲ್ಲ ತೆಲುಗರ ಪೈಕಿ ಶ್ರೀನಾಥ, ಜಕ್ಕನ ಎಂಬ ಕವಿಗಳು ಬರಲು ಅವರಿಗೂ ಕನಕಾಭಿಷಕ Ph. D. ಸಿಕ್ಕವು. 'ಜಕ್ಕನ ನೀ ವೈದುಷ್ಟಮು' ಎಂದು ಹೊಗಳಿಕೆಯೂ ಸಿಕ್ಕಿತು. ನಿಕೊಲೋಕಾಂಟಿ, ಅಬ್ದುಲ್‌ರಝಾಕರು ಬರಲು ಅದುದು ಹೀಗೆ "ನಾನೂ ಅಬ್ದುಲ್‌ರಝಾಕನೆಂಬ ಪ್ರಯಾಣಿಕನೂ ಈ ದಿವಸ ಚಕ್ರವರ್ತಿಯ ಆಸ್ಥಾನಕ್ಕೆ ಹೋದೆವು. ಚಕ್ರವರ್ತಿಯು ನಮಗೆ 'ಕರ್ಣಾಟ ಕವಿ ಲಲಾಮ' ಎಂಬ ಪದವಿಯನ್ನು ಕರುಣಿಸಿದನು. ಅವನ ಔದಾರ್ಯ ಹೇಳತೀರದು" ಎಂದು ಕಾಂಟಿಯೇ ಹೇಳಿದಾನೆ.

ಮೂರನೆಯದಾಗಿ ವಿಮರ್ಶೆಯ ಮೂಲಸೂತ್ರವೆಂದರೇನು? ಸ್ವಲ್ಪ ವಿಚಾರಿಸೋಣ ನಾವು 'ನನ್ನ ಮನಸೆಳೆದ ಸುಂದರಿ' ಎಂಬ ರೋಮಾಂಚಕಾರೀ ಕಾದಂಬರಿಯನ್ನೋದುತ್ತಿದೇವೆ ಎನ್ನೋಣ. ಆಗ ನಮ್ಮ ಮಿತ್ರ ಬಂದ. ಅವನ ಒಂದು ಕೈಲಿ 'ರಾಮಾಯಣದರ್ಶನ' ಮತ್ತೊಂದು ಕೈಲಿ 'ಪ್ಯಾರಡೈಸ್ ಲಾಸ್ಟ್' ಇವೆರಡರಲ್ಲಿ ಒಂದು ಮೇರು ಕೃತಿ ಮತ್ತೊಂದು ಆಲ್ಪ್ಸ್ ಕೃತಿ ಎನ್ನುತ್ತಾನೆ. ನಮಗೆ ಕತೆಯಲ್ಲಿ ಆಸಕ್ತಿ ತುಂಬಾ ತುಂಬಿ ತುಳುಕುತ್ತಿದೆ. ಕಾದಂಬರಿಯಲ್ಲಿ ನಾಯಕನು, ಅವನ ಮನಸೆಳೆದ ಸುಂದರಿಯನ್ನು ಇನ್ನೇನು ಚುಂಬಿಸುವ ಸಮಯ. ಆಗ ನಮ್ಮ ಮಿತ್ರ ಮಹಾಶಯನಿಗೆ ನಾವೇನು ಹೇಳಬೇಕು? ಹೌದು ನೀನು ಹೇಳುವುದು ನಿಜ. ಅವು ಮೇರುಕೃತಿಗಳು ಎನ್ನಬೇಕು. ಇದೇ ವಿಮರ್ಶೆಯ ಮೂಲಸೂತ್ರ. ಮೊದಲನೆಯದಾಗಿ ಆ ಮೇರುಕೃತಿಗಳನ್ನು ನಾವು ಓದಿಲ್ಲ, ಓದುತ್ತಿಲ್ಲ, ಓದುವ ಸಂಭವವೂ ಇಲ್ಲ. ಮೇರು ಪರ್ವತವನ್ನು ಹತ್ತಿಲ್ಲ, ಹತ್ತುತ್ತಿಲ್ಲ, ಹತ್ತಲು ಹೊರಡುವುದೂ ಇಲ್ಲ. ನಮಗೆ ಬಾಕಿಗುಡ್ಡವೇ ಗತಿ 'ನನ್ನ ಮನಸೆಳೆದ ಸುಂದರಿ'ಯೇ ಸಾಕು. ನಾವು ಮಹಾಕಾವ್ಯಗಳು ಮಹಾಕಾವ್ಯಗಳಲ್ಲ ಎಂದರೆ ನಮ್ಮ ಮಿತ್ರನೊಡನೆ ಚರ್ಚೆಗೆ ಆರಂಭವಾದೀತು, ಆ ಚರ್ಚೆಗೆ ಸಮಯವಿಲ್ಲ. 'ಆಹಾ! ಆ ಚುಂಬನ ವ್ಹಿಸ್ಕಿಯಂತೆ ಮಾದಕವಾಗಿತ್ತು'...... ಎಂದು ಆರಂಭವಾಗುವ ಪರಿಚ್ಛೇದದಲ್ಲಿದ್ದೇವೆ ನಾವು ಮೇರುಕೃತಿ—ನಿನ್ನ ಕೈಲಿರುವುದು, ಎಂದರೆ ನಮ್ಮ ಮಿತ್ರ ತೊಲಗುತ್ತಾನೆ.

ಈ ರಹಸ್ಯ ದೇವರಾಯನಿಗೆ ಗೊತ್ತಿತ್ತು. ಅಂತೆಯೇ ಅವನು ತನ್ನ ಆಸ್ಥಾನಕ್ಕೆ ಬಂದ ಕವಿಗಳನ್ನೆಲ್ಲಾ ಮನ್ನಿಸುತ್ತಿದ್ದ. ಮಲ್ಲಣ್ಣನು ತನ್ನ ರೇವಣಸಿದ್ಧೇಶ್ವರ ಕಾವ್ಯವನ್ನು ಸಭೆಯಲ್ಲಿ ಓದಿದಾಗಲೂ, ಭಾಸ್ಕರನು ಜೀವಂಧರ ಚರಿತೆಯನ್ನು ಓದಿದಾಗಲೂ ದೇವರಾಯನು ನಿದ್ರಿಸುತ್ತಿದ್ದು ನಂತರ ಅವು ಎವೆರೆಸ್ಟಮ್ಮನ—ಗುಡ್ಡ ಕೃತಿಗಳೆಂದು ಹೇಳಿದ. ನೂರೊಂದು ವಿರಕ್ತರ ಹಾರಗವಿತೆಗಳೂ ದೇವರಾಯನ ಪ್ರಶಂಶೆಗೆ ಪಾತ್ರವಾದವು. ದೇವರಾಯನ ಮಂತ್ರಿ ಲಕ್ಕಣ್ಣ ದಂಡೇಶ ಈ ಕಾಲದ ಪ್ರಮುಖರಲ್ಲಿ ಒಬ್ಬನು. ಇವನು ಮುಳುಬಾಗಿಲಿನಲ್ಲಿ ಇದ್ದನೆಂದೂ ಹೇಳಲಾಗಿದೆ.

ಅವನು ಎಲ್ಲಿಯೇ ಇರಲಿ, ಅವನಿಗೆ ಪದ್ಯ ಬರೆಯುವ ಚಟವಿದ್ದುದು ನಿಜ. ಒಂದು ದಿವಸ ಈತನು ದೇವರಾಯನ ಬಳಿಗೆ ಬಂದು 'ಎರಡು ಸಾವಿರ ಚಿಲ್ಲರೆ ಪದ್ಯದ ಮಹಾಕೃತಿ ರಚಿಸಿದೇನೆ ಪ್ರಭೋ' ಎಂದನು. ದೇವರಾಯನು ಎರಡು ನಿಮಿಷ ಸ್ಥಂಭಿತನಾಗಿ 'ಆದುದು ಆಗಿಹೋಯ್ತು, ಮುಂದೆ ಹೀಗಾಗದಿರಲಿ, ನಿನ್ನದು ಖುಷ್ಯ ಮೂಕಕೃತಿ' ಎಂದು ಮನ್ನಿಸಿ ಲಕ್ಕಣ್ಣನನ್ನು ಮನೆಗೆ ಕಳುಹಿಸಿ ತಾನು ಗದ್ಯ ಬರೆಯುವುದನ್ನು ಮುಂದುವರಿಸಿದನು.

ಲಕ್ಕಣ್ಣನ ಗ್ರಂಥ (ಶಿವತತ್ವ ಚಿಂತಾಮಣಿ)ದ 2231 ಪದ್ಯಗಳೂ 'ಚರಣಾಂಬುಜಕ್ಕೆ ಶರಣು' ಎಂದು ಕೊನೆಗೊಳ್ಳುತ್ತವೆ. ಲಕ್ಕಣ್ಣನ ರಾಜನೀತಿಸಾರ ಇಲ್ಲಿ ಅಡಗಿದೆ. ಲಕ್ಕಣ್ಣನು ಕೈಮುಗಿದು ಚರಣಾಂಬುಜಕ್ಕೆ ಶರಣು ಎಂದು ಹೇಳಿದರೂ ಅವನ ಕಂಕುಳಲ್ಲಿ ದೊಣ್ಣೆ ಇದ್ದೇ ಇರುತ್ತಿತ್ತು. ಕಂಕುಳಲ್ಲಿ ದೊಣ್ಣೆ ಅಥವಾ ದಂಡ ವಿದ್ದುದರಿಂದ ಅವನಿಗೆ ದಂಡೇಶ ಎಂಬ ಹೆಸರಾಯ್ತು. ಆ ದಂಡದ ಸಹಾಯದಿಂದಲೇ ವಿಜಯನಗರ ರಾಜ್ಯ ಸರಾಗವಾಗಿ ಸಾಗುತ್ತಿತ್ತು. ಅಬ್ದುಲ್‌ರಝಾಕ್ ಈ ಬಗ್ಗೆ ಹೀಗೆ ಬರೆದಿದ್ದಾನೆ. 'ವಜೀರ್ ಲಕ್ಕಣ್ಣ ಬಹೂತ್ ಹುಷಾರ್ ಆದ್ಮೀ ಹೈ. ಉನೆ ಮೂಹ್ ಮೆ 'ಚರಣಾಂಬುಜಕ್ಕೆ ಶರಣು' ಕರ್ಕೆ ಬೋಲ್ತಾ, ಲೇಕಿನ್ ಉನ್ಕಾ ಹಾತ್ ಮೆ ಹಮೇಶಾ ಏಕ್ ಲಾಠೀ ರಹ್ ತಾ.'



'ಚರಣಾಂಬುಜಕ್ಕೆ ಶರಣು'
(ಖುಷ್ಯಮೂಕ ಕೃತಿ ಸಮರ್ಪಣೆ)

ನಿಕೋಲೋಕಾಂಟಿ ಇದನ್ನು ಮುಂದುವರಿಸಿ "Therefore they say there 'ಕಂಕುಳಲ್ಲಿ ದೊಣ್ಣೆ ಕೈಲಿ ಶರಣಾರ್ತಿ' thus ruleth and writeth Lakkanna the Dandesha" ಎಂದು ಬರೆದಿದ್ದಾನೆ.

ರಾಜನೂ ಮಂತ್ರಿಯೂ ಕವಿಗಳಾದರೆ, ಸೇನಾಪತಿ ಜಕ್ಕಣ್ಣನೇನು ಕಡಿಮೆಯೆ? ಅವನೂ ಕವಿ. ಅವನು ಏಕೋತ್ತರ ಶತಸ್ಥಳವನ್ನು ಬರೆದು, ನೂರೊಂದು ವಿರಕ್ತ

ರೊಡನೆ ಕಲಿತು ರಾಜಗುರುವಾದ ಮುಕುಂದಪೆದ್ದಿಯೊಡನೆ ವಾದಮಾಡಿ ಅವನನ್ನು ಸೋಲಿಸಿದನು. ಮುಕುಂದಪೆದ್ದಿ ಓದುತ್ತಿದ್ದ ಭಾರತವು ಸತ್ತವರ ಕತೆ ಎಂದು ಜಕ್ಕಣ್ಣ ಹೇಳಲು ಮುಕುಂದನು 'ಇದ್ದವರ ಕತೆ ಬರೆಯಿರಿ ನೋಡೋಣ' ಎಂದನು. ನೂರೊಂದು ವಿರಕ್ತರಲ್ಲೊಬ್ಬನಾದ ಚಾಮರಸನು 'ಪ್ರಭುಲಿಂಗಲೀಲೆ'ಯನ್ನು ಬರೆದು ಇದು ಇದ್ದವರ ಕತೆ ಎಂದು ಹೇಳಿದನು. ಆದರೆ ಆಸ್ಥಾನದ ಕರಣಿಕರಲ್ಲಿ ಒಬ್ಬನಾದ ನಾರಣಪ್ಪನು ಭಾರತ (ಹಿಂದೆ ದ್ವಾಪರಯುಗದಲ್ಲಿ ಇದ್ದು) ಸತ್ತವರ ಕತೆ ಪ್ರಭುಲಿಂಗ ಲೀಲೆ, (ಮೊನ್ನೆ ಮೊನ್ನೆ ಸತ್ತರೂ, ಈಚೆಗೆ ಈ ಯುಗದಲ್ಲಿ) ಇದ್ದವರ ಕತೆ ಎಂದು ವಾದಿಸಿದನು. ಮಾತಿಗೆ ಮಾತು ಬೆಳೆಯಿತು ಜಗಳ ರಾಜನವರೆಗೂ ಹೋಯಿತು. ದೇವರಾಜ 'ಕಾವ್ಯದಲ್ಲಿ ಎಷ್ಟು ಪದ್ಯಗಳಿವೆ?' ಎಂದನು. 1111 ಪದ್ಯ ಎಂದರು ವಿರಕ್ತರು. 'ರಸವತ್ತಾಗಿದೆಯೇನಪ್ಪ ಚಾಮಯ್ಯ' ಎಂದ ರಾಯ 'ಹೋ ಇಲ್ಲಿ ನೋಡಿ ಸ್ವಾಮಿ' ಎಂದು ಚಾಮರಸನು ತನ್ನ ಕಾವ್ಯವನ್ನು ಹಿಂಡಿದನು. ಆಗ ತಾಳೆಯೋಲೆಯ ನಡುವೆ ಕಂಠಪತ್ರವಿದ್ದುದುದರಿಂದ ಕೈ ಕೊರೆದು ರಕ್ತ ಬಂತು. ವಿರಕ್ತರು ಹೋಯೆಂದರು. ರಾಜನು ಪ್ರಭುಲಿಂಗಲೀಲೆ 'ಮಾತಂಗಕೃತಿ' ಎಂದು ಹೊಗಳಿ ಅದನ್ನು ಪಲ್ಲಕ್ಕಿಯುಮೇಲೆ ಮೆರವಣಿಗೆಗೆ ಕಳಿಸಿಬಿಟ್ಟು ತನ್ನ ಆಪ್ತಸಚಿವ ಲಕ್ಕರಸಯ್ಯನನ್ನು ಕರೆದು 'ಹೋಯಿತೇನಯ್ಯ ಮೆರವಣಿಗೆ?' ಎಂದು ಕೇಳಿದ. 'ಹೌದು ಪ್ರಭೋ! ಪ್ರಭುಲಿಂಗಲೀಲೆ ಬಹಳ ರಸವತ್ತಾಗಿದೆಯೇ ಪ್ರಭೋ?' ಎಂದ ಲಕ್ಕರಸ. (ಲಕ್ಕಣ್ಣನಲ್ಲ. ಅವನು ಮೆರವಣಿಗೆ ಜೊತೆಯಲ್ಲಿ ಹೋಗಿದ್ದ)

'ಓದಿದವರು ಯಾರು ಅದನ್ನು? ಅದಿರಲಿ, ಅವರು ಗಲಾಟೆ ಮಾಡುವಾಗ ಈ ಪದ್ಯ ಕಟ್ಟಿದೆ ಬರೆದುಕೋ ಇದನ್ನ' ಎಂದು ಈ ಪದ್ಯ ಹೇಳಿದ ದೇವರಾಜ.

ಇರುಳೋಪರವುಪ್ಪರಿದು ತಳ್ಪದೊಳೊಲಿದು
ಚ್ಚರಿಸುವ ಕಾಮುಕಲಾಲಾಪವ ಮನೆ
ಯರಗಿಳಿ ಕೇಳ್ದದನಿರದೆ ಪಿರಿಯರೊಳಗುದಯದೊಳುಸಿರುತಿರೆ
ದರಹಸಿತಾನನೆ ಲಜ್ಜಿಸಿಕರ್ಣಾ
ಭರಣದ ಮಾಣಿಕ್ಯವ ದಾಳಿಂಬದ
ಪರಳೆಂದೀವನೆವದಿ ನಿಲಿಸಿದಳಾ ಕೀರನ ಬಲ್ಸರವ.

ಹುಟ್ಟು ರಸಿಕ ದೇವರಾಜ! ಸೊಬಗಿನ ಸೋನೆ, ಅಮರುಗ ಎಂಬ ಎರಡು ಗ್ರಂಥಗಳನ್ನು ರಚಿಸಿದ ಎರಡೂ ಶೃಂಗಾರ ಕಾವ್ಯಗಳೆಂಬುದನ್ನು ಹೇಳಬೇಕಿಲ್ಲ.

— ಅ. ರಾ. ಸೇ.

---

# ಸಮಿತಿ

ಲಾಯರೊಬ್ಬ, ಹೆಂಗಸೊಬ್ಬ—
ರೇನೊ ಎಂತೊ ಇನ್ನು ಒಬ್ಬ,
ರೈತನೊಬ್ಬ, ಅಳಿಯನೊಬ್ಬ,
ವೈದ್ಯನೊಬ್ಬ, ಕಿವುಡನೊಬ್ಬ,—
ಹರಟೆ ಹೊಡೆವೆವು

ಪಾದ ಸೇವೆ, ಹಲ್ಲು ಕಿರಿತ,
ಸೊಂಟ ಬೆಂಡು, ತಲೆಯ ಕೆರೆತ,
ಹೊಸಲ ಮುಂದೆ ಸದಾ ಕುಣಿತ,
ಪಡೆದೆವಾವು ಪದವಿ ಮೆರೆತ—
ವಿಷಯ ತಿಳಿಯದು

ಏಳು ಮಂದಿ ದೇಶ ಬಂಧು
ಒಂದು ಸಮಿತಿ ಮೆಂಬರಾಗಿ
ದುಂಡು ಮೇಜು ಸುತ್ತ ಬಾಗಿ
ಎಂಟು ಮೂಲೆಯಿಂದ ಬಂದು—
ಗೊರಕೆ ಹೊಡೆವೆವು

ಸಮಿತಿ ಕಾರ್ಯದರ್ಶಿಯೆಂಬ
ನೌಕರನವನು ಜಾಣನು !
ಅವಗೆ ಗೊತ್ತು ವಿಷಯ ತುಂಬ
ವರದಿ ಬರೆದು ತರುವನಾಗ—
ರುಜುವ ಮಾಳ್ಪೆವು.

— ಪಾಟಾಳಿ.

# ಸುಂಕದೋನ ಹತ್ತಿರ

---

ಭೀಮನ ಅಮಾವಾಸ್ಯೆದಿನವೇ ಮನೆಯಲ್ಲಿ ನನ್ನ ಮೇಲೆ ಅವಿಶ್ವಾಸ ನಿರ್ಣಯ ಮಂಡಿಸಲ್ಪಟ್ಟಿತು. ಹೇಗೂ ರಜಾ ಇದೆಯಲ್ಲಾ ಅಂತ ಸಹ ಅಧಿಕಾರಿಗಳ ಜತೆ ಆಫೀಸಿನಲ್ಲೇ ಇಸ್ಪೀಟ್ ಆಡ್ತಾ ಇದ್ದ ಕಾರಣ ಮನೆಗೆ ಊಟಕ್ಕೆ ಬರುವ ಹೊತ್ತಿಗೆ ಸುಮಾರು ಒಂದೂವರೆ ಗಂಟೆಯಾಗಿತ್ತು. ವರಾಂಡಾದ ಬಾಗಿಲಲ್ಲೇ ನನ್ನ ಸಹಧರ್ಮಿಣಿ ಕಡುಬಿನಂತೆ ಮುಖ ಉಬ್ಬಿಸಿಕೊಂಡು, ಎದುರುಗೊಂಡಳು "ಇಲ್ಲೇ ಅರ್ಧ ಗಂಟೆಯಿಂದ ಕಾದಿದ್ದೇನೆ, ಅಳಿಯಂದಿರು ಬಂದು ಆಗಲೇ ಎರಡು ಗಂಟೆ ಆಯ್ತು, ಮಕ್ಕಳೆಲ್ಲಾ ಹಸಿದು ಕಂಗೆಟ್ಟಿವೆ, ನೀವು ಬಂದಮೇಲೆ ಎಲ್ಲರೂ ಊಟ ಮಾಡೋಣ ಅಂತ ಎಲ್ಲರೂ ಕಂಗೆಟ್ಟು ಹಾಳುಮುಖದಲ್ಲೇ ಕೂತಿದ್ದಾರೆ" ಎಂದು ಶುರುಮಾಡಿದಳು ಗಂಡನ ಪೂಜೆಗೆ.

ಯಾಲಕ್ಕಿ ಅಗಿಯುತ್ತಾ ಬೇಗ ಬೇಗ ಊಟಕ್ಕೆ ಕುಳಿತುಕೊಂಡಾಗ, ಪಕ್ಕದಲ್ಲಿ ಅಳಿಯಮ್ಯೈಯಂದಿರು ಬಂದು ಕುಳಿತುಕೊಂಡಾಗ, ಪೂಜೆಯು ಮುಗಿಯಿತು. ಊಟದ ಹೊತ್ತಿನಲ್ಲಿ ಮಕ್ಕಳಾಗಲೀ ಅಳಿಯಂದರಾಗಲೀ 'ಹ್ಞೂ' 'ಉಹ್ಞೂ' ಬಿಟ್ಟು ಬೇರೆ ಮಾತನಾಡಲೇ ಇಲ್ಲ. ಅವಿಶ್ವಾಸ ನಿರ್ಣಯ ಮಂಡಿಸಲ್ಪಟ್ಟದ್ದು ಚೆನ್ನಾಗಿ ಮನದಟ್ಟಾಯಿತು.

ಆ ರಾತ್ರೆ ನಾನು ಸರ್ಕಾರದ ಕೆಲಸ ನಿಮಿತ್ತ ಮೈಸೂರಿಗೆ ಹೊರಡಬೇಕಾಗಿತ್ತು. ಹಾಸಿಗೆ, ಸೂಟ್‌ಕೇಸು ಸಿದ್ಧಮಾಡೆಂದು ಹೇಳಲು ಧೈರ್ಯ ಸಾಲದು. ಊಟದ ಅಮಲು, ನನಗೆ ಸಿದ್ಧಮಾಡಿಕೊಳ್ಳಲು ದುಸ್ಸಾಧ್ಯ. ಒಂದು ನಿದ್ರೆ ಮಾಡಿ ಎದ್ದು ನಂತರ ಯೋಚಿಸೋಣ ಎಂದಂದುಕೊಂಡು ಮಲಗಿದೆ. ಎಚ್ಚತ್ತಾಗ ನಾಲ್ಕುವರೆ ಗಂಟೆ. ನಮ್ಮ ಸಚಿವರ ಜವಾನ ಕೂಗಿ ಎಚ್ಚೈಸಿದಾಗಲೇ ಎಚ್ಚರವಾದುದು. "ಸ್ವಾಮಿ! ಸಾಹೇಬರು ಈಗಲೇ ನಿಮ್ಮನ್ನು ಬರಹೇಳಿದ್ದಾರೆ. ನಾಳೆ ಮೈಸೂರಿನ ಮೀಟಿಂಗಿನ ವಿಷಯ ಮಾತಾಡಬೇಕಂತೆ" ಎಂದು ಆತ ಹೇಳಿದ.

ಮಾರನೆಯದಿನದ ತುರ್ತು ಕೆಲಸಕ್ಕೆ ಸಚಿವರು ಹಿಂದಿನ ದಿವಸ ಸಂಜೆ ಹೇಳಿ ಕಳಿಸಿದರೆ, ಆಲಯಕ್ಕೆ ಬರುವ ಅಥಿತಿ ಅಭ್ಯಾಗತರ, ವೋಟು ನೆಂಟರಿಷ್ಟರ ಗಲಾಟೆಯಲ್ಲಿ ನಮ್ಮ ಕಾರ್ಯ ಹದಿನೈದೇ ನಿಮಿಷದಲ್ಲಿ ಮುಗಿಯುವುದಾದರೂ ರಾತ್ರಿ ರೈಲು

ಹೊರಡುವ ಹೊತ್ತಿಗೆ ಮುಗಿದರೆ ನನ್ನ ಪುಣ್ಯ. ಆ ಕಾರಣದಿಂದ ಅವಿಶ್ವಾಸನಿರ್ಣಯ ವನ್ನು ಹಾಗೇ ವಿಷಕಂಠನಂತೆ ನುಂಗಲಾರದೆ ನುಂಗಲೆತ್ನಿಸಿ ಅಮ್ಮಾವರಿಗೆ ಹೇಳಿದೆ- "ರಾತ್ರಿ ಎಂಟಕ್ಕೆ ಮನೆಗೆ ಬರದಿದ್ದರೆ, ಜವಾನನ ಕೈಲಿ ಹಾಸಿಗೆ ಸೂಟುಕೇಸನ್ನು ಸ್ಟೇಷನ್ನಿಗೆ ಕಳಿಸು" ಎಂದು.

ಉತ್ತರಕ್ಕೆ ಕಾಯದೆ, ಹಿಂತಿರುಗಿ ನೋಡದೆ, ಸಚಿವಾಲಯಕ್ಕೆ ಹೊರಟೆ. ರಾತ್ರಿ ಎಂಟೂಮುಕ್ಕಾಲು ಗಂಟೆಗೆ ಸಚಿವರು ಅಪ್ಪಣೆ ಕೊಟ್ಟರು. "ನಾಳೆ ಬೆಳಿಗ್ಗೆ ಮೈಸೂರಲ್ಲಿ ಎಂಟುಗಂಟೆಗೆ ಬಂಗಲೆಯಲ್ಲಿ ಬಂದು ಕಾಣಿರಿ. ಅಲ್ಲೇ ವಿಷಯವನ್ನು ಚರ್ಚಿಸಿ, ಒಂಭತ್ತು ಗಂಟೆ ಮೀಟಿಂಗಿಗೆ ಹಾಜರಾಗೋಣ ಎಂದು.

ಎಂಟೂಮುಕ್ಕಾಲಿಗೆ ಸಚಿವಾಲಯದಿಂದ ನೇರನೆ ಸ್ಟೇಷನ್ನಿಗೆ ಹೊಂಟೆ ಆ ಹಾಳುರಸ್ತೆಯಲ್ಲಿ ತಿಳಿದವರ ವಾಹನವೊಂದೂ ಸಿಗಲಿಲ್ಲ. ಬಾಡಿಗೆ ವಾಹನಕ್ಕೆ ಚೈತನ್ಯ ನನ್ನಲ್ಲಿದ್ದಿಲ್ಲ. ಒಂಭತ್ತೂಮುಕ್ಕಾಲಿಗೆ ಸ್ಟೇಷನ್ ಸೇರಿದೆ. ಪುಣ್ಯ! ಹೊರಡುವಾಗ ಮನೆಯಿಂದ, ಮೊದಲೇ ಕಾದಿರಿಸಲ್ಪಟ್ಟ ಟಿಕೇಟನ್ನು ತೆಗೆದುಕೊಂಡು ಬಂದಿದ್ದೆ. ರೈಲುಗಾಡಿ ಸೇರುವಾಗ್ಗೆ ನನ್ನ ಕಚೇರಿ ಜವಾನ ಹಾಸಿಗೆ ಹಾಸಿದ್ದ, ಡಬ್ಬಿಯಲ್ಲಿ (ಇನ್ನುಮುಂದೆ ಅಖಂಡಕರ್ಣಾಟಕ; ಇದನ್ನೆಲ್ಲಾ ತಿಳಿಯಕೊಳ್ಳಲೇ ಬೇಕು) ಸುಸ್ತಾಗಿದ್ದೆ ಹಾಸಿಗೆ ಹಿಡಿದು ಮಲಗಿದೆ. ಜವಾನ ಬಾಗಿ ನಮಸ್ಕರಿಸಿ ಹೊರಟುಹೋದ. ಹಬ್ಬದ ಹೊತ್ತಿನ ಊಟ, ಸರ್ಕಾರಿ ಕಾರ್ಯನಿಮಿತ್ತ ನೊಣ ಹೊಡೆದ ತಾಪ, ನಡೆದು ಬಂದ ಸುಸ್ತು, ಕಾರಣ, ಬೆಂಗಳೂರಲ್ಲಿ ಮಲಗಿದವ ಶ್ರೀರಂಗಪಟ್ಟಣದಲ್ಲೇ ಎದ್ದಿದ್ದು—ಆ ಡಬ್ಬಿಯಲ್ಲಿ ಇನ್ನಾರಾದರೂ ಇದ್ದರೋ ಏನೋ ಅದೂ ತಿಳಿಯದು.

ಟವಲು ತೆಗೆದುಕೊಳ್ಳೋಣ ಎಂದು ಸೂಟ್‌ಕೇಸ್ ಹುಡುಕುತ್ತೇನೆ ಅದೇ ಇಲ್ಲ. ಅದಿರಬೇಕಾದಲ್ಲಿ ಒಂದು ಹಳದಿ ಟ್ರಂಕಿದೆ. ೨೫ ವರ್ಷದ ಹಿಂದೆ ಮದುವೆ ಯಲ್ಲಿ ನಮ್ಮ ಶೀರ್ಘರೂಪು ಮಾವಂದಿರು ಬಳುವಳಿ ಕೊಟ್ಟ ಟ್ರಂಕಿನಂತೆಯೇ ಇತ್ತು ಅದಕ್ಕೆ ಬೀಗ ಹಾಕಿದೆ. ಆದರೆ ಅದರ ಬೀಗದಕೈ ನನ್ನಲಿಲ್ಲ. ನನ್ನ ಜನಿವಾರದಲ್ಲಿ ಇರುವ ಬೀಗದಕೈ ನನ್ನ ಸೂಟ್‌ಕೇಸಿನದು!

ನಾನೂ ಮನಸ್ಸಿನಲ್ಲೇ ಮನೆಯವರ ಮೇಲೆ ಅವಿಶ್ವಾಸ ನಿರ್ಣಯ ಹೂಡಿ, ಹಾಸಿಗೆಯಲ್ಲಿದ್ದ ಹಳೇ ಪಂಚೆಯನ್ನೇ ಟವಲಾಗಿ ಉಪಯೋಗಿಸಿಕೊಂಡೆ. ಮೈಸೂರು ಬರುವ ಹೊತ್ತಿಗೆ ಹಾಸಿಗೆ ಕಟ್ಟಿಟ್ಟು ಹೊರಬೀಳಲು ಸಿದ್ಧವಾಗಿದ್ದೆ — ಆ ಕಡೆ ಮಲಗಿ ದ್ದಾತ ಆಗ ಕಣ್ಣಿಗೆ ಬಿದ್ದ. ಕಣಿವೆ ಕೆಳಗಿನ ಕುಂಭಕೋಣನಂತಿದ್ದ ದೇಹ. ಅಂತೇ ಆಗಲೂ ಗೊರಕೆ ಹೊಡೆಯುತ್ತಿದ್ದ.

ಮೈಸೂರು ಸ್ಟೇಷನ್ ಬಂತು ಕೂಲಿಯವ ಬಂದ. ನಾನಿಳಿದೆ. ಹಾಸಿಗೆ ಟ್ರಂಕನ್ನು ಕೂಲಿಯವ ಹೊರಕ್ಕೆ ತಂದ. ಪಾಪಸಂದ್‌ಗೆ ಇನ್ನೇನು ಏರಿಸಬೇಕು?

ಆಗ ಸುಂಕದವ ಪ್ರತ್ಯಕ್ಷನಾದ. ಟ್ರಂಕು ತೆಗೆಯಿರಿ, ಹಾಸಿಗೆ ಬಿಚ್ಚಿ ಎಂದ. ಹಾಸಿಗೆ ಬಿಚ್ಚಿದೆ, ಟ್ರಂಕಿನ ಬೀಗವಕ್ಕೆ ಇಲ್ಲ ಎಂದು ಹೇಳಿದೆ. ಆತ ಹುಬ್ಬು ಕೊಂಕಿಸಿ "ಹಾಗೇ ಸಾರ್! ಅಂದಮೇಲೆ ಟ್ರಂಕಿನೊಡನೆ ಆಫೀಸಿಗೆ ಬನ್ನಿ, ಅಲ್ಲಿ ಅಧಿಕಾರಿಗಳಿಗೆ ಹೇಳಿ ಈ ಸಬೂಬನ್ನು" ಎಂದ.

ಹೇಗೂ ಈ ಟ್ರಂಕು ನನಗೆ ಇಲ್ಲಿ ಉಪಯೋಗವಿಲ್ಲ. ಇವರ ಹತ್ತಿರವೇ ಇರಲಿ, ನಾನೂ ಸರ್ಕಾರದ ಅಧಿಕಾರಿ, ಎಲ್ಲೂ ಹೋಗುಲ್ಲ ಎಂದು ಬೇಗ ಸ್ಥಿರಮಾಡಿ ಆ ಟ್ರಂಕನ್ನಲ್ಲಿಯೇ ನೆಲದಮೇಲೆಯೇ ಬಿಟ್ಟು, ನನ್ನ ವಿಸಿಟಿಂಗ್ ಕಾರ್ಡನ್ನು ಅವನ ಕೈಲಿ ಕೊಟ್ಟು, 'ನೀನೇ ಇಟ್ಟುಕೊಂಡಿರಯ್ಯಾ ಆಮೇಲೆ ಬರ್ತೀನೆ' ಎಂದು ಹೇಳಿ ನೇರನೆ ಮೈಸೂರಿನ ಸಚಿವ ನಿವಾಸದ ಲಾಯದಲ್ಲಿ ನಿಖರವಾಗಿದ್ದ ನನ್ನ ಗೂಡಿಗೆ ತೆರಳಿದೆ – ಗೂಡು ಸೇರುವಾಗ್ಗೆ ಏಳೂಕಾಲಾಗಿತ್ತು. ಏಳೂವರೆಗೆ ಕಾಫಿ ಕುಡಿದು, ಏಳೂಮುಕ್ಕಾಲಿಗೆ ಪತ್ರ ಕಾಗದಗಳನ್ನೆಲ್ಲಾ ಕೂಡಿಸಿಕೊಂಡು, ಎಂಟಕ್ಕೆ ಸಚಿವಾಲಯದಲ್ಲಿ ಹಾಜರಾಗಿ — ಸಚಿವರೊಡನೆ ಎಂಟೂವರೆತನಕ ಚರ್ಚಿಸಿ, ಆ ಮಹಾನುಭಾವ ಸಚಿವರ ಜತೆಯಲ್ಲೇ ಎಂಟುಮುಕ್ಕಾಲಿಗೆ ಆರೋಗಣೆ ಬೆಳೆಸಿ ಒಂಭತ್ತಕ್ಕೆ ಅವರ ಕಾರಿನಲ್ಲೇ ಮೀಟಿಂಗಿಗೆ ಮುಂದಿನ ಸೀಟಿನಲ್ಲೇ ಕುಳಿತು ಹೊರಟೆ. ೧೧ಕ್ಕೆ ಮೀಟಿಂಗ್ ಯಶಸ್ವಿಯಾಗಿ ಮುಗಿದಮೇಲೆ, ಸಚಿವರಪ್ಪಣೆ ಇತ್ತರು—'ರೀ! ಈಗ ಮನೆಗೆ ಹೋಗೋಣ. ಬೇಗ ಸಾಮಾನೆಲ್ಲಾ ಕಟ್ಟಿಕೊಳ್ಳಿ. ಬೆಂಗಳೂರಿಗೆ ಹೋಗಬೇಕು. ಮಧ್ಯಾಹ್ನ ೧ಕ್ಕೆ ಊರು ಸೇರುತ್ತೀವೆ. ನೀವು ಬೆಂಗಳೂರಿನಲ್ಲಿ ಎರಡು ಗಂಟೆಗೆ ಈ ಕಾಗದ ಪತ್ರಗಳನ್ನು ತೆಗೆದುಕೊಂಡು ಬನ್ನಿ. ಈ ವಿಷಯ ಇಂದಿನ ಸಚಿವ ಸಮ್ಮೇಳನದಲ್ಲಿ ತೀರ್ಮಾನಿಸಲೇಬೇಕು!

ಸುಗ್ರೀವಾಜ್ಞೆ! ಟ್ರಂಕನ್ನು ಸುಂಕದವನಿಗೇ ತಾತ್ಕಾಲಿಕವಾಗಿ ತ್ಯಾಗ ಹಾಕಿ ಬೆಂಗಳೂರಿಗೆ ಬಂದೆ, ಧ್ವಜವೇರಿದ ಕಾರಿನಲ್ಲಿ. ಬೆಂಗಳೂರಿನಲ್ಲಿ ಸಚಿವಾಲಯದಿಂದ ಧ್ವಜದ ಗುರ್ತಿನ ಜಟ್ಕಾದಲ್ಲಿ, ನನ್ನ ಮನೆಗೆ ಬಂದೆ.

ಬಾಗಿಲಲ್ಲೇ ನನ್ನ ಸಹಧರ್ಮಿಣಿ! ಎರಡೂ ಕಪೋಲಗಳೂ ತೋಯ್ದಿವೆ. ಗುಳಿಗಣ್ಣು. ಜೋಲುಮುಖ. ಕಂಭದ ಪಕ್ಕದಲ್ಲಿ ಕಂಭದಂತೆ ನಿಂದಿದ್ದಾಳೆ, ವರಾಂಡಾದಲ್ಲಿ.

ನಾನು ಇನ್ನೂ ಬದುಕಿರುವಾಗಲೇ ಯಾಕೆ? ಹೀಗೆ? ಈಗ? ಎಂದು ಹಣೆಯ ರೇಖೆಯನ್ನು ಪ್ರಶ್ನಾರ್ಥಗೊಳಿಸಿದೆ

"ತಪ್ಪಾಯ್ತು ಅಂದ್ರೆ! ಏನೋ ಗಲಾಟೆಯಲ್ಲಿ, ನಿಮ್ಮ ಸೂಟ್‌ಕೇಸನ್ನು ಕಳಿಸಲು ನಿನ್ನೆ ರಾತ್ರಿ ಮರೆತುಬಿಟ್ಟೆ. ನಿನ್ನೆ ಆ ಕಡುಬು ಮಾಡುವಾಗ ಅದು ನೊದಲು ಹದಕೆಟ್ಟು ಕಾಯಿಕಡುಬು, ಹೂರ್ಣದ ಕಡುಬು ಚೂರು ಚೂರಾಯಿತು.

ಶಿವನೇ ಹೀಗೇಕಾಯ್ತು? ಎಂದು ಯೋಚನೆ ಹತ್ತಿತು. ನೀವೂ ಹೊತ್ತಾಗಿ ಬಂದಿರಿ. ನಾನೂ ದುಡಿದಿದ್ದೆ, ಹಸಿದಿದ್ದೆ. ನೀವೂ ತುರ್ತಾಗಿ ಹೊರಟುಹೋದಿರಿ. ನಾನೂ ಅವಸರವಾಗಿ ಸಾಮಾನು ಕಟ್ಟಿದೆ. ಎಂಟಕ್ಕೆ ಅಳಿಯಂದಿರು ಬಂದರು. ಜವಾನ ಹಾಸಿಗೆ ಸೂಟುಕೇಸು ತೆಗೆದುಕೊಂಡುಹೋಗಲಿ ಎಂದು ವರಾಂಡಾದಲ್ಲೇ ಇಟ್ಟಿದ್ದೆ. ಅಳಿಯಂದಿರು ಬರುವ ಹೊತ್ತಿಗೆ ನಾನು ಮನೆಯೊಳಗೆ ಹೋದೆ. ರಾತ್ರಿ ಊಟವಾದ ಮೇಲೆ ಬಾಗಿಲು ಹಾಕಿಕೊಳ್ಳುವಾಗ ನೋಡುತ್ತೇನೆ ಸೂಟುಕೇಸು ವಠಾರದಲ್ಲಿದೆ. ಏನುಮಾಡಲೂ ಗೊತ್ತಾಗಲಿಲ್ಲ. ರಾತ್ರಿಯೆಲ್ಲಾ ನಿದ್ದೆ ಹತ್ತಲಿಲ್ಲ. ಎಷ್ಟು ಕಷ್ಟ ಪಟ್ಟಿರೋ ಏನೋ! ಬೆಳಗ್ಗೆ ಜವಾನ ಬಂದಾಗ ಇದೇನೋ ಇಲ್ಲೇ ಇದೆ ಸೂಟು ಕೇಸು ಎಂದೆ! "ಅಮ್ಮಾ! ಇದು ಅಳಿಯಂದರದಲ್ಲವಾ!! ಹಾಗೆಂದೇ ಇದನ್ನು ಒಳಗಿಟ್ಟು ಹಾಸಿಗೆ ಮಾತ್ರ ಟೇಸನ್ನಿಗೆ ತೆಗೆದುಕೊಂಡುಹೋದ್" ಎಂದ.

ಕೆರೆ ಒಡೆದವನ ಹತ್ತಿರ ಕಂಬಳಿ ಕಿತ್ತುಕೊಂಡಹಾಗೆ? ಅವನನ್ನು ಅಂದು ಏನು ಪ್ರಯೋಜನ? ಅಳಿಯಂದಿರಿಗೆ ನಾಚದೆ ನಾನೇ ಉತ್ಸುವಾರಿ ನೋಡಿಕೊಳ್ಳ ಬೇಕಾಗಿತ್ತು" ಎಂದು ತಿರುಪತಿ ಕಳೆಯ ಮುಖವನ್ನೇ ಧರಿಸಿದಳು.

ನನಗೆ ಅಯ್ಯೋ! ಎನ್ನಿಸಿತು. ಕರುಳು ಕುಯ್ಯಿತು ಅಬಲೆ ಹೀಗೆ ಕೊರಗು ವುದು ಅಸಹನೀಯವಾಯ್ತು. ನನ್ನ ಗಂಟಲಲ್ಲಿ ಸಿಗರೇಟ್ ಹೊಗೆ ಸಿಕ್ಕಿಕೊಂಡಿತು.

ಬಾಲೇ! ಬಾಲೇಂದು ಫಾಲೇ! ಕೊರಗಬೇಡ ನನ್ನ ಮುಪ್ಪಿನ ಮನದನ್ನೆ! ಆ ಸೂಟುಕೇಸು ಇಲ್ಲದುದರಿಂದ ನನಗೇನೂ ಕಷ್ಟವಾಗಲಿಲ್ಲ. ಆದರೆ?

ಆಗ ಟ್ರಂಕಿನ ಜ್ಞಾಪಕ ಬಂತು. ಸುಂಕದವನ ನೆನಪು ಬಂತು. ಎಲ! ಎಲಾ!! ಎಂದುಕೊಂಡು ಆಕೆಗೆ ಹೇಳಿದೆ ನಡೆದ ಸಂಗತಿಯನ್ನು.

*  *  *

ಮೂರುದಿನಗಳಾನಂತರ ಸುಂಕದ ಇಲಾಖೆಯವರು ಸರ್ಕಾರದ ಬಸ್ಸಿನಲ್ಲಿ ಆ ಟ್ರಂಕನ್ನೂ ಒಂದು ಕ್ಷಮಾಪಣೆ ಪತ್ರವನ್ನೂ ನಮ್ಮ ಮನೆಗೆ ಕಳಿಸಿದರು ಅದನ್ನು ಹಾಗೆಯೇ ಹಜಾರದಲ್ಲಿ ಇಟ್ಟಿದ್ದೇವೆ.

ಪ್ರಾಯಶಃ ಅದರ ಮಾಲೀಕ ಕಣಿವೆ ಕೆಳಗಿನ ಕುಂಭಕರ್ಣ ನಂಜನಗೂಡಿನಲ್ಲಿ ಎದ್ದಾಗ, ತನ್ನ ಟ್ರಂಕನ್ನು ಹುಡುಕಿದ್ದಿರಬೇಕು? ಅವನಾರೋ ಅವನ ವಿಳಾಸವೇನೊ ನಂಜುಂಡೇಶ್ವರನೇ ಬಲ್ಲ!!

— ಕುಮಾರು

# ನೀತಿಯ ಕಥೆಗಳು

( ಬಲಿತವರಿಗೆ)

ಒಂದಾನೊಂದು ಕಾಲದಲ್ಲಿ, ತೋಪಿನ ಮರವೊಂದರಲ್ಲಿ, ಗೂಡು ಕಟ್ಟಿಕೊಂಡು ಒಂದು ಕಾಗೆ ಜತೆ ಸಂಸಾರ ಹೂಡಿತ್ತಂತೆ. ಬಲವಂತಕ್ಕೆ ಒಪ್ಪಿಕೊಂಡ ಕೋಗಿಲೆಯೊಂದು ಹೆರುಕ್ಕೆ ಮನೆ ಸಿಗದೆ, ಬೇನೆ ಪಟ್ಟುಕೊಂಡು ಬಾಡಿಗೆ ಗೂಡು ಹುಡುಕುತ್ತಿದ್ದಾಗ ಈ ಕಾಗೆ ಗೂಡು ಖಾಲಿಯಾಗಿದ್ದುದು ಕಂಡಿತಂತೆ. ಈ ಗೂಡಿನ ಮಾಲೀಕರು ಕೆಲಸಕ್ಕೆ ಹೋಗಿರಬಹುದೇ ಎಂದು ಯೋಚಿಸಲೂ ಹೊತ್ತು ಸಿಗದೆ ಅಲ್ಲೇ ಮೊಟ್ಟೆಯಿಟ್ಟು ಹಗೂರಾಗಿ ಹಾರಿಹೋಯ್ತಂತೆ.

ಆ ಮೊಟ್ಟೆ ಕಾಗೆಗಳ ಮೊಟ್ಟೆಗಳ ಜತೆಯಲ್ಲೆ ಬಿರಿದು ಬೆಳೆಯಿತಂತೆ.

ಆದರೆ ನೋಡಿ! ಹಸಿವಾದಾಗ ಅತ್ತರೆ ಅಮ್ಮ ಆಹಾರ ಕೊಡ್ತಾಳೆ ಅಂತ ಈ ಕೋಗಿಲೆ ಮರಿ ಮೆಲ್ಲಗೆ ಅಳುವ ತನಕ ಎಲ್ಲಾ ಚೆನ್ನಾಗಿತ್ತು. ಒಂದು ಸಂಜೆ ಸ್ವಲ್ಪ ಬೇಗ ತಾಯಿ ಕಾಗೆ ಒಬ್ಬಳೇ ಬಂದು ನೆರೆ ಮರದ ಕಾಗೆ ಹತ್ತಿರ ಕಾ ಕಾ ಮಾಡುತ್ತಿದ್ದಾಗ ತನ್ನ ಗೂಡಿನಿಂದ ಕೂ ಹೂ ಕೇಳಿಸಿತಂತೆ. "ಎಲ ಎಲಾ ಇದು ನನ್ನ ಗೂಡಿನ ಟೆಲಿಫೋನ್ ಶಬ್ಧವಲ್ಲ! ಆದರೂ ಅಲ್ಲಿಂದಲೇ ಬರುತ್ತಿದೆ! ಮನಲಾ ಏನಾದರೂ ನನ್ನವ ನಾನಿಲ್ಲ ಎಂದು ಇನ್ನು ಯಾರಾದರನ್ನೂ ಕರೆದು ತಂದಿರಬಹುದೆ?" ಎಂದು ಅನುಮಾನಪಟ್ಟಿತಂತೆ.

ನೆರೆ ಮರದ ಕಾಗೆಯು ಕೊಕ್ಕನ್ನು ಒಮ್ಮೆ ಒರೆಸಿ, ಬೇಗ ತನ್ನ ಗೂಡಿಗೆ ಹಾರಿ ಬಂತಂತೆ, ತನ್ನ ಕೊಕ್ಕನ್ನು ಮಸೆಯುತ್ತಾ.

ತನ್ನ ಗೂಡಿನಲ್ಲೇನಿದೆ? ನಾಲ್ಕು ಕಪ್ಪುಮಕ್ಕಳು ಕಲಿಪಿಲಿಮಾಡುತ್ತಾ ಯಥಾಪ್ರಕಾರ ಕಾದಾಡುತ್ತಿವೆ! ಗೂಡನ್ನೆಲ್ಲಾ ಹುಡುಕಿತಂತೆ. ಔಟ್‌ಹೌಸ್‌ನೆಲ್ಲಾ ತಡಕಿತಂತೆ. ಎಲ್ಲೂ ಏನೂ ಸಿಗಲೇ ಇಲ್ಲವಂತೆ.

ಅಯ್ಯೋ! ಅನ್ಯಾಯವಾಗಿ ನಮ್ಮವರ ಮೇಲೆ ಅನುಮಾನಪಟ್ಟೆನಲ್ಲಾ! ಎಂತಹ ಪಾಪಿ! ನಾನು! ತಪ್ಪು ಟೆಲಿಫೋನ್ ನಂಬರಿಗೆ ಅನುಮಾನಪಟ್ಟು ನೆರೆ ಮರದ ಕಾಗೆಯನ್ನು ಬಿಟ್ಟು ಬಂದೆನಲ್ಲಾ ಎಂದು ಪಶ್ಚಾತ್ತಾಪ ಪಟ್ಟಿಕೊಂಡಿತಂತೆ.

ನೀತಿ— **ಟೆಲಿಫೋನ್ ಧ್ವನಿಯಿಂದ ಮೋಸಹೋಗಬೇಡಿ.**

— ಪ್ರಸಾದ್.

# ಪ್ರಥಮ ಪುರುಷ

ನಾನು—ನನ್ನಿಂದ — ನನಗೆ — ನನ್ನ ದೆಶೆಯಿಂದ — ನನ್ನಲ್ಲಿ— ನನ್ನ— ನನ್ನ ಮಗ— ನನ್ನಾಕೆ—ನನ್ನಮನೆ--ನನ್ನ ಕೀರ್ತಿ—ನನ್ನ ಮಾನ—ನಾನೇ ನಾನು—ನನ್ನಿಂದಲೇ ಮಳೆ ಬೆಳೆ — ಗಾಳಿ ಬೆಳಕು — ಸಂಜೆ ಕತ್ತಲೆ — ನಾನು — ನಾನು ಯಾರು ?

ನಾನ್ಯಾರು?.... ಇದರ ಬಗ್ಗೆ ಚಿಂತನ ಮಾಡಲಿಕ್ಕೆ ರಮಣಮಹರ್ಷಿ ಆಶ್ರಮಕ್ಕೆ ಹೋಗಿ ನನ್ನನ್ನು ನಾನೇ ಕಾಣಬೇಕು ನನ್ನ ತನ ಮೆರೆಸಬೇಕು—ಛೆ ನಾನೇನು ಮೂಢನೇನು ನಾನು ಯಾರೆಂಬುದು ನನಗೇ ತಿಳಿಯದಿದ್ದರೆ ನಾಯಿಪಾಡು ಮಾಡಿಯಾರು ಮಂದಿ.

ನಾನೊಬ್ಬ ಭಯಂಕರ ಭಾಷಣಕಾರ—ನನ್ನ ನಾಲಿಗೆಯ ತೀಟಿ ಮಾತಾಡಿದಷ್ಟೂ ಹೆಚ್ಚುತ್ತದೆ—ನುಸೆದಷ್ಟೂ ಮಾತಿನ ದಾಹ. ನಾನೊಬ್ಬ ಮಾತಾಡುವ ಮಿಷೀನ್ನು ಎಂದು ಅಂದವರುಂಟು. ಮತ್ತೆ ಕೆಲವು ಆಗದವರು 'ಅವನ ಮಾತು ಬಹು ಸೊಗಸು—ಆದರೆ ಆಡಿದ ಮಾತಿಗೆ ಅರ್ಥವಿರಬೇಡವೆ?' ಎಂದು ಹುಬ್ಬು ಹಾರಿಸುವರು.

ಮೊಟ್ಟಮೊದಲು ನಾನು ಮಾತಾಡಿದಾಗ ನಮ್ಮಮ್ಮ ಮುತ್ತಿಕ್ಕಿದ್ದಳು— ಅದೇ ನಮ್ಮಪ್ಪ ನನ್ನ ಮಾತು ಕೇಳಿ ಬೇಸತ್ತು ಎರಡು ಇಕ್ಕಿದ್ದರು ಬೆನ್ನಮೇಲೆ ನಾನು ಎಂಟುವರ್ಷದವನಿದ್ದಾಗ. ಎಂಟರಿಂದ ಹದಿನೆಂಟು ಮುಟ್ಟಿದಾಗ ಸ್ವಯಂಪರಿಪೂರ್ಣ ವಾಚಾಳಿಯಾಗಿದ್ದೆ. ಇಡೀ ಸ್ಕೂಲೇ ಬೆದರಿತ್ತು ನನ್ನ ಬಾಯಿಗೆ.

ಆದರೇ ೯....೯ ...೯....೯....

ದಿನಕಳೆದಂತೆ ನನ್ನಮಾತಿನ ಮಾಲೆ ನನಗೆ ಉರುಲಾಗಿ ಕೊರಳು ಬಿಗಿಯಿತೆಂದರೆ ಎಂತಹ ವ್ಯಥೆ? "ನಾನು.... ಸಾಧಿಸುವುದೇನು-ನಾನು ನೆಡೆದಂತೆ ನೆಡೆಯಿದಿರು ನುಡಿದಂತೆ ನೆಡೆ" ಎಂದು ವೇದಿಕೆಯಮೇಲೆ ಘರ್ಜಿಸಿದಾಗ ಬಿಸಿಲಿಗೆ ಹಿಮ ಕರಗಿದಂತೆ ಸೇರಿದ ಮಂದಿ ಕರಗಿ ಹೋದರು.

ನನ್ನ ಮದುವೆಯಾಯಿತು. ನಾಲ್ಕು ಮಂದಿಯ ಮುಂದೆ ನನ್ನ ಹೆಂಡತಿಯೇ ಸೌಂದರ್ಯವತಿ—ಅವಳೇ ಊರಿಗೆಲ್ಲಾ ಪದ್ಮಾವತಿ—ಅವಳೇ ನನ್ನ ಸ್ವರ—ಅಂದಿನಿಂದ ಅವಳ ಬಗ್ಗೆಯೇ ನನ್ನ ಮಾತಾಯಿತು.

"ಮಹನೀಯರೇ ಹುತ್ತು ಮಹಿಳೆಯರೇ........ಮಹಿಳೆಯರೆಂದರೆ....ನನ್ನ ಸಹ ಧರ್ಮಿಣಿ ನೆನಪಿಗೆ ಬರುತ್ತಾಳೆ—ಅವಳ ತ್ಯಾಗಾ...."

—ಎಂದು ತುಟಿ ಮಾರಿ ಮಾತು ಮಿಡಿದಾಗ ಸಭೆಯಲ್ಲಿನ ಕಿಲಾಡಿ "ಹೌದು ಅದು ಮಹಾ ತ್ಯಾಗ ಬೇರೆಲ್ಲರನ್ನು ಬಿಟ್ಟು ನಿನ್ನ ಕೈಯ್ಯುಮಾಲೆಗೆ ಕತ್ತು ಬಗ್ಗಿಸಿದ್ದು" ಎಂದು ಟೀಕಿಸಿದ್ದ. ಕಿಲಾಡಿ ಎಂದು ಅಂದೆನೆ? ಅಲ್ಲ ಅವ ಅವಿವೇಕಿ.

"ಅವಿವೇಕಿ" ಎಂದಾಗ "ಯಾರು?" ಎಂಬ ಸವಾಲು ಬರುವುದು. ನನ್ನ ಮಾತೆಂದರೆ ಯಾರಿಗೂ ಬೇಡವಾಯ್ತೆಂದರೆ ನನ್ನ ನಾಲಿಗೆ ಇದ್ದೇನು ಪ್ರಯೋಜನ? ನಿಜ! ತುಂಬಿದ ಸಭೆಯಲ್ಲಿ ನನ್ನ ಬಗ್ಗೆ—ನನ್ನ ಅರ್ಧಾಂಗಿಯ ಬಗ್ಗೆ—ನನ್ನ ಮಗನ ವಿಚಾರ—ನನ್ನ ಮಗಳ ಗಂಡನ ಶೌರ್ಯ ವರ್ಣಿಸಬಾರದು. ಆದರೇನು ಮಾಡಲಿ ....ಆ ಎಲ್ಲ ವಿಚಾರ ಹತ್ತುಮಂದಿಗೆ ತಿಳಿಸಬೇಕಾದರೆ ತುಂಬಿದ ಸಭೆಗಿಂತ ಬೇರೆ ಮಾರ್ಗ ಉಂಟೆ?

"ಮೂವತ್ತೆರಡು ವರ್ಷದಿಂದ ದೇಶಸೇವೆ ನಡೆಸಿದ್ದೇನೆ—ನನ್ನ ಅಳಿಯ—ನನ್ನ ಮಗಳು ಮಾಡಿದ ತ್ಯಾಗ—ನನ್ನ ಮಗನ ಶೌರ್ಯ ಹೇಳಿಕೊಳ್ಳಲೇಬೇಕಾಗಿದೆ, ನನ್ನ ಅಳಿಯನ ಕಾದಂಬರಿ 'ಚೂರು ರೊಟ್ಟಿ' ಓದಿದ್ದೀರಾ? ಅದೊಂದು ಭಯಂಕರ ಸಮಸ್ಯಾತ್ಮಕ ಕಾದಂಬರಿ ......."

"ಹೌದು ಅದು ಕಾದಂಬರಿ ಎಂಬುದು ಸಮಸ್ಯಾತ್ಮಕವೆ" ಎಂದೊಬ್ಬ ಗೊಣಗಿದ್ದ.

"ನನ್ನ ಮಗನ ಕಾವ್ಯ ಸಂಗ್ರಹವನ್ನು ಯಾರೊಬ್ಬ ವಿಮರ್ಶಕನೂ ವಿಮರ್ಶಿಸಿಲ್ಲ ಎಂದರೆ ಅದರ ಕಠಿಣತೆ ಅರ್ಥವಾಗುತ್ತದೆ"

—ಎಂದಾಗ 'ಬರೆದಾತನಿಗೇ ಅದು ಅರ್ಥವಾದರೆ ನಿಮ್ಮ ಪುಣ್ಯ' ಎಂದೆನ್ನುವರು. ನಾನು ಏನು ಮಾತಾಡಿದರೂ ಸಹಿಸರು. ನಮ್ಮ ವಿಚಾರ ನಾವಲ್ಲದೆ ಬೇರೆಯವರು ಯಾಕೆ ಹೇಳುತ್ತಾರೆ? ನಾವು ನಾವೇ— ನಾನು —ನನ್ನ ಮಗ— ಮಗಳು—ಅಳಿಯ—ನನ್ನಾಕೆ—ಅವಳ ತಮ್ಮ, ಇವರಿಷ್ಟೇ ನನ್ನ ಸರ್ವಸ್ವ. ಅವರೇ ನನಗೆ ಮರ್ಯಾದೆ ಮಾಡುವವರು. ನಾನಾಡಿದ ಒಂದು ಮಾತು ಅವರಿಗೆ ವೇದ ವಾಕ್ಯ. ಆದ್ದರಿಂದ ಅವರ ಬಗ್ಗೆ ನಾನು ಮೆಚ್ಚಿಗೆ ಮಾತಾಡಬಾರದೆ? ಸಭೆಗಳಲ್ಲಿ ಹೊಗಳಿದರೆ ಇತರರೇಕೆ ಉಗುಳಬೇಕು?

"ಮಹನೀಯರೇ....ಇವತ್ತು ಶ್ರೀವರ್ಮ.... ... ..........ರು ಮಾತಾಡುವುದಿಲ್ಲ ಧೈರ್ಯವಾಗಿ ಸಭೆಯಲ್ಲೇ ಇರಬಹುದು" ಎಂಡು ನನಗಾಗದ ದಾಯಾದಿ ತನ್ನ ಬಾಯಿ ತೀಟೆ ತೀರಿಸಿಕೊಂಡಿದ್ದ.

ಈಚೀಚಿಗೆ ಪರಿಸ್ಥಿತಿ ಬಹಳ ಹದಗೆಟ್ಟಿದೆ. ನಾಲ್ಕುಜನ ಸೇರಿದಲ್ಲಿ ನಾನು ಹೋದರೆ ಹಾವು ನೋಡಿದವರಂತೆ ಹೌಹಾರಿ ಚದುರುವರು. ನನ್ನ ನಾಲಿಗೆ ಮಸೆದು ಹರಿತವಾಗಿ ನಿಂತಿದೆ—ಕೇಳುವ ಕಿವಿಗಳಿಲ್ಲದೆ ತಹತಹ ಪಡುತ್ತಿದೆ.

ನನ್ನ ಅಳಿಯನನ್ನು ಕೂಗಿ ಕರೆದೆ, ಮಗಳ ಗಂಡ ಬಂದು ನಿಂತ. "ಅಯ್ಯಾ ನನ್ನ ಗತಿ ಹೀಗಾಯ್ತಲ್ಲ—ನನಗೆ ಭಾಷಣಕ್ಕೆ ಅವಕಾಶವೇ ಬೇಡವೇ ಒಂದು ವೇದಿಕೆಯ ಮೇಲೆ ನಿಲ್ಲಿಸಿ ಕಿವಿ ಚಾಚಿ ಕೇಳಬಾರದೆ?" ಎಂದು ತೋಡಿಕೊಂಡೆ. ನನ್ನಾಕೆಯ ಬಗ್ಗೆ ವೇದಿಕೆಯ ಮೇಲೆ ಪುಂಖಾನುಪುಂಖಶಂಖ ಹೊಡೆದಿದ್ದೇನೆ ಅವಳಿಗಾದರೂ ನಿಯತ್ತು ಬೇಡವೆ? ಅವಳೂ ನನ್ನ ಮಾತನ್ನು ಕೇಳುವುದಿಲ್ಲ. ಅವಳ ಮಾತನ್ನೇ ನನ್ನ ಕಿವಿಗೆ ಹೊಯ್ಯುತ್ತಾಳೆ. ಮಗನೋ—ನನ್ನ ಮಗ ಕೇಳಬೇಕೆ—"ಅಪ್ಪಾ ನನ್ನ ಮಾತು ಕೇಳು" ಎಂದು ನನಗೇ ಪೀಡಿಸುವ. ಇದ್ದಿದ್ದರಲ್ಲಿ ಅಳಿಯನೇ ಮೇಲು—ಒಂದು ಸಭೆ ಸೇರಿಸಿದ ಕೇಳಲು ಜನ ಕೂಡಿಸಿದ.

ಸುಮಾರು ನಾಲ್ಕೂವರೆ ತಾಸು ತೃಪ್ತಿಕರವಾಗಿ ಭಾಷಣ ಮಾಡಿದೆ. ಕೇಳಲು ಕೂತ ಸುಮಾರು ನೂರು ಜನ ಏಳಲಿಲ್ಲ....ಅದೊಂದು ಶಾಲೆಯಲ್ಲಿ ನನ್ನ ಕೊರತ ಶುರುವಾಗಿತ್ತು. ಅದು ಮೂಗು—ಕಿವುಡ—ಕುರುಡರ ಶಾಲೆ—ಅನಾಥಾಶ್ರಮ. ಆದರೇನು ಜನ ಸಿಕ್ಕರಲ್ಲಾ ನನ್ನ ಭಾಷಣಕ್ಕೆ—ಎಂಬ ಸಂತೋಷದಲ್ಲಿ ಕಡೆಯದಾಗಿ ಉಳಿದ ಉಂಗುರ ಮಾರಿ ಹಾರಗಳನ್ನು ತರಿಸಿ ಪ್ರತಿ ಸಭಿಕನಿಗೂ ಹಾಕಿ ಕೈ ತಟ್ಟಿ—ಹೊರಬಿದ್ದೆ. ಅಲ್ಲಿಂದಲೇ ನನ್ನ ಅಳಿಯನನ್ನು ಹುಡುಕಿ ತಂದದ್ದು—ಅಲ್ಲಿಗೇ ಮಗನನ್ನು ಸೇರಿಸಿದ್ದು.

ನಾನು—ನಾನೆಲ್ಲಿ ಹೊರಡಲಿ? ಎಂದಾಗ—ನನ್ನ ಸಹಧರ್ಮಿಣಿ—ಯಾರ ಗುಣಗಾನ ಸಭೆ ಸಭೆಯಲ್ಲಿ ವರ್ಣಿಸಿದೆನೊ ಆ ಹೆಣ್ಣುಮಗಳು ಹೇಳಿದಳು—

'ಹುಚ್ಚರಾಸ್ಪತ್ರೆಗೆ' ಎಂದು.

—ಹಾಗೇ ಮಾಡಲೇ? ವಾಚಕರೇ ಸಲಹೆ ನೀಡಿ!

— ದಾಶರಥಿ ದೀಕ್ಷಿತ್.

——o——

**ಹಾದಿಯಲ್ಲಿ ಕೇಳಿಸಿದುದು—**

"ಏನ್ರಿ —ಇನ್ನಾದರೂ ನಮ್ಮ ಹುಡುಗರಿಗೆ—ಸಮಯಕ್ಕೆ ಸರಿಯಾಗಿ ಪಾಠ, ಸಕಾಲದಲ್ಲಿ ಪರೀಕ್ಷೆ ಆಗೋ ಸಂಭವವಿದೆಯೇ? ಅಥವಾ ಯಥಾಪ್ರಕಾರ ಗೋಡ್ಸೇನ ನೆನೆಸಿಕೊಂಡೇ ಶಾಲೇನ ಶುರುಮಾಡ್ಬೇಕೋ ?"

**ವೈದ್ಯರಲ್ಲಿ। ವಿಷನಿಮಿಷಗಳು—**

"ಡಾಕ್ಟ್ರೇ-ನಂಗೆ ಈ ನಡವೆಯೆಲ್ಲಾ ತಲೆನೋವು. ಆದರೆ ಔಷಧೀ ತಕೊಂಡ್ರೆ ಅದೇ ಅಭ್ಯಾಸವಾಗಿ ಹೋಗುತ್ತಲ್ಲಾಂತ ಭಯ—ಏನು ಮಾಡ್ಲಿ?"

"ತಲೇನೋವನ್ನೇ ಅಭ್ಯಾಸಮಾಡಿಕೊಳ್ಳಿ !"



ಇದನ್ನು ನಾನೂ ನೋಡಿದ ಮೇಲೆ ನಾನೂ ಪತಿದಾನ್ ಮಾಡಿಬಿಡೋಣ ಅನ್ನಿಸ್ತಿದೇಮ್ಮಾ !

# ಪ್ರಶ್ನೆ ಪತ್ರಿಕೆ

---

ಅಮೇರಿಕಾ ದೇಶದಲ್ಲಿ, ಅಂದರೆ, ಸಂಯುಕ್ತ ಸಂಸ್ಥಾನದಲ್ಲಿ, ಹಲವಾರು ವಿಶ್ವವಿದ್ಯಾಲಯುಗಳಲ್ಲಿ, ದಾಂಪತ್ಯ ಜೀವನವನ್ನು ಕುರಿತ ಪಾಠಪ್ರವಚನಗಳನ್ನು ಏರ್ಪಡಿಸಿರುವರಂತೆ. ಅಲ್ಲಿ ತರುಣ ತರುಣಿಯರು (ಎಷ್ಟೇ ವಯಸ್ಸಿನವರಾದರೂ) ಕಾಲೇಜು ಸೇರುವುದರ ಮುಖ್ಯ ಉದ್ದೇಶ, ಇತರ ತಮ್ಮ ಸಹಪಾಠಿ, ಪಾಠಿನಿಯುವರನ್ನೊಲಿಸಿ, ಸತಿಪತಿಯರನ್ನು ಸಂಪಾದಿಸುವುದೇ ಆಗಿರುವುದರಿಂದ, ನೂರಾರು ಜನ ಈ ಪಾಠ ಕ್ರಮಗಳಲ್ಲಿ ಆಸಕ್ತಿ ವಹಿಸುವರಂತೆ. ಮುಂದಿನ ಪಂಚವಾರ್ಷಿಕ ಯೋಜನೆಯಲ್ಲಿ ಭಾರತದಲ್ಲೂ ಇಂತಹ ಕೋರ್ಸುಗಳೂ, ಅವುಗಳಲ್ಲಿ ಪರೀಕ್ಷೆಗೆ ಕುಳಿತು, ಪಾಸಾದವರಿಗೆ ಪ್ರಶಸ್ತಿ ಪತ್ರಗಳ ವಿತರಣವೂ, ಬರುವ ಸಂಭವವಿದೆಯಾದ್ದರಿಂದ, ದಾಂಪತ್ಯಕ್ಕಿಳಿವ ತರುಣರಿಗೂ ತರುಣಿಯರಿಗೂ, ಅಲ್ಲಿ ಕೊಡಲಾಗುತ್ತಿರುವ ಪ್ರಶ್ನೆ ಪತ್ರಿಕೆಗಳೊಂದೊಂದನ್ನ ಇಲ್ಲಿ ಭಾಷಾಂತರಿಸಲಾಗಿದೆ.

## I [ಮುತ್ತೈದೆಯರಿಗಾಗಿ]

1. ನಿಮ್ಮ ಕುಟುಂಬದ ಯಜಮಾನ್ಯ ಯಾರಿಗೆ? ಏಕೆ? ನೀವು ಅದನ್ನ ನಿರ್ವಹಿಸಲು ಅಸಮರ್ಥರು ಎಂಬುದಕ್ಕೆ ಹತ್ತು ಕಾರಣಗಳನ್ನು ಬರೆದು ವಿಶದೀಕರಿಸಿ

2. ಮದುವೆಯಾದ ಎರಡನೆಯ ವರ್ಷದಲ್ಲಿ ನಿಮ್ಮ ಹೆಂಡತಿ, ತಲೆನೋವು, ಎನ್ನುತ್ತ ಹಾಸಿಗೆ ಹಿಡಿದರೆ, ನೀವು ಯಾವ ರೀತಿ ಆಕೆಯ ಶುಶ್ರೂಷೆಗೆ ತೊಡಗುವಿರಿ? ಎಂಟನೆಯ ವರ್ಷದಲ್ಲಿ? ಹನ್ನೆರಡನೆಯ ವರ್ಷದಲ್ಲಿ?

3. ಅಡಿಗೆ ಹೊಲಸು ಎಂಬುದನ್ನು ಹೊರಗೆಡಹದಿರಲು ನೀವು ನಿಮ್ಮ ಮುಖವನ್ನು ಹೇಗೆ ಅಳವಡಿಸಿಕೊಳ್ಳುತ್ತೀರಿ .......ಚಿತ್ರ ಬರೆಯಿರಿ.

4. ನಿಮ್ಮ ಕೋಟು ಷರಾಯಿ ಇತ್ಯಾದಿ ಉಡಿಗೆ ತೊಡಿಗೆಗಳು ಹೇಗಿರಬೇಕೆಂಬುದನ್ನ ನೀವೇ ಏಕೆ ನಿರ್ಧರಿಸಬಾರದು?

5. ನಿಮಗೂ ನಿಮ್ಮ ಮಕ್ಕಳಿಗೂ ಬರುವ ಖಾಯಿಲೆಗಳು ಆಕೆಯ ತಿಳಿಗೇಡಿತನದಿಂದ ಉಂಟಾದುವಲ್ಲ ಎಂದು ನೀವು ಡಾಕ್ಟರ ಮುಂದೆ ಹೇಗೆ ಸಮರ್ಥಿಸುವಿರಿ, ತಿಳಿಸಿ.

6. ರಾತ್ರಿ ಹೊತ್ತು ಮೀರಿ ಮನೆಗೆ ಬಂದಾಗ, ನೀವು ಹೇಳಬೇಕಾದ ನೆಪಗಳ ಪೈಕಿ ಹೆಚ್ಚು ಫಲಕಾರಿಯಾಗಬಹುದಾದ ಹನ್ನೆರಡನ್ನು ಬರೆಯಿರಿ.

7. ನಿಮ್ಮ ಅತ್ತೆಯನ್ನು ಸದಾ ಹರ್ಷಚಿತ್ತರಾಗಿರಿಸಲು ನೀವು ಅನುಸರಿಸಬೇಕಾದ ಕ್ರಮಗಳೇನೇನು?

8. "ಹೆಣ್ಣಲ್ಲವೆ ನಮ್ಮನೆಲ್ಲ ಹೆತ್ತ ತಾಯಿ?" ಅಥವ, "ಕಾಮಿನೀ ಕಾಂಚನ" ಅಥವ, "ಭಾರ್ಯಾ ರೂಪವತೀ ಶತ್ರು" ಎಂಬ ಆಯೋಕ್ತಿಯನ್ನು ಕುರಿತು ಒಂದು ಪತ್ರ ಬರೆಯಿರಿ.

## II [ಮುತ್ಹೈದೆಯರಿಗಾಗಿ]

1. ನಿಮ್ಮ ಅತ್ತೆ ನಿಮ್ಮ ಮನೆಗೆ ಬಂದು ವಕ್ರಿಸದೆ ಇರುವುದಕ್ಕೂ, ನಿಮ್ಮ ತಮ್ಮಂದಿರು ಬಂದು ಸೇರಿಕೊಳ್ಳುವುದಕ್ಕೂ ನೀವು ಕೈಗೊಳ್ಳುವ ಉಪಾಯ ಗಳನ್ನು ವಿವರಿಸಿ.

2. ಗಂಡನ ಸಂಪಾದನೆ ಪೂರ್ತ ನಿಮ್ಮ ಕೈ ಸೇರಲು ನೀವು ಹೂಡಬೇಕಾದ ತಂತ್ರಗಳೇನೇನು?

3. ಅದೇ ಉಂಡೇನು, ಕದ ತೆಗಿ, ಎಂದು ಆತ ಕೂಗಿಕೊಂಡರೆ, ನೀವು ಅದನ್ನೇ ಬಡಿಸುತ್ತೀರಾ?

4. ಮದುವೆಯಾಗುವತನಕ ಬುದ್ಧಿವಂತನೂ ಸುಂದರನೂ ಆಗಿದ್ದ ಆ ತರುಣ ಮದುವೆಯಾದ ಕೂಡಲೇ ಶುದ್ಧ ದಡ್ಡನೂ ಕುರೂಪಿಯೂ ಆಗಲು ನೀವು ಕಾರಣವಲ್ಲವೆಂಬುದನ್ನು ಸಮರ್ಥಿಸಿ.

5. ವಿವಾಹ ವಿಚ್ಛೇದನದ ಹಕ್ಕು ನಿಮಗೆ ದೊರೆತಿದೆ ಎಂಬುದನ್ನು ಯಾವ ಯಾವ ಸಂದರ್ಭದಲ್ಲಿ ನೀವು ನಿಮ್ಮ ಗಂಡನಿಗೆ ಸೂಚಿಸುತ್ತೀರಿ? ಹೇಗೆ ಸೂಚಿಸು ತ್ತೀರಿ?

6. ವೇಶ್ಯಾವೃತ್ತಿ, ಪರಪತೀವ್ಯಾಮೋಹ, ಇತ್ಯಾದಿಗಳನ್ನು ಕುರಿತ ಆಧುನಿಕ ಸರಸ ಕಾದಂಬರಿಗಳಿಂದ ನೀವು ಏನು ಪಾಠ ಕಲಿತಿರಿ? ಅಂತಹ ಕಾದಂಬರಿಗಳ ಕರ್ತನನ್ನು ನೀವು ಮನೆಯೊಳಕ್ಕೆ ಸೇರಿಸುತ್ತೀರಾ? ನಿಮ್ಮ ಗಂಡನಿಗೆ ಪರಿಚಯ ಮಾಡಿ ಕೊಡುತ್ತೀರಾ?

7. ನೀವು ಬೀಳೆಂದರೆ, ಮಳೆ ಬೀಳುತ್ತದೆಯೆ? ಚರ್ಚಿಸಿ.

8. ಮೂಕಪ್ರಾಣಿಗಳಿಗೂ ಗಂಡಂದಿರಿಗೂ ಇರುವ ವ್ಯತ್ಯಾಸವೇನು? ಇದ್ದರೆ, ಅದರಮೇಲೆ ಒಂದು ಪ್ರಬಂಧ ಬರೆಯಿರಿ.

— ರುದ್ರಮ್ಮ.

---



# ಎಂದಿಗೆ

ಅಮೇರಿಕಾ! ಅಮೇರಿಕಾ!
ಕಲಿಯುಗದ ಕುಬೇರಿಕಾ!

ಅವನು ಹೋದ, ಇವನು ಹೊರಟ
ಅವನು ಬಂದ, ಡಿಗ್ರಿ ತಂದ
ಅವಳು ಬಂದಳವನ ಜೊತೆಗೆ
ಇವಳು ಅಲ್ಲೇ ಉಳಿದಳು

ಅಮೇರಿಕಾ! ಅಮೇರಿಕಾ!
ಕಲಿಯುಗದ ಕುಬೇರಿಕಾ!

ನಾಳೆ ಅವನು, ನಿನ್ನೆ ಇವನು
ಮೊನ್ನೆ ಈಕೆ ಗಂಡ ಹೊರಟ
ಆಚೆ ಮೊನ್ನೆ ಗುಂಡ ಬಂದ
ಹೊಸ ನಮೂನೆ ಟೈಯ ತಂದ

ಅಮೇರಿಕಾ! ಅಮೇರಿಕಾ!
ಕಲಿಯುಗದ ಕುಬೇರಿಕಾ!

ಹಾರಿ ಹೋದ, ತೂರಿ ಹೋದ,
ಅಜ್ಜಿ ಮಾತು ಮೀರಿ ಹೋದ,
ಕಾಸು ವೆಚ್ಚ ಮಾಡದೆ ಅವ
ಕೂಸು ಸಹಿತ ಹೋಗಿ ಬಂದ

ಅಮೇರಿಕಾ! ಅಮೇರಿಕಾ!
ಕಲಿಯುಗದ ಕುಬೇರಿಕಾ!

ನಾದಸ್ವರವ ನೂದಿ ಬಂದ
ವೇದಸ್ವರವನೋದಿ ಬಂದ
ಮೀಸೆ ಮಾತ್ರ ಬೆಳೆಸಿ ಬಂದ
ದೋಸೆ ಹುಯ್ಯೆ ಕಲಿತು ಬಂದ

ಅಮೇರಿಕಾ! ಅಮೇರಿಕಾ!
ಕಲಿಯುಗದ ಕುಬೇರಿಕಾ!

ಕಂಡ ಕಂಡ ಹುಡುಗರೆಲ್ಲ
ಉಂಡು ತೇಗಿ ಬರುವರಲ್ಲಾ
ಕೈಯ ಕುಲುಕಿ ಮೈಯ ಬಳುಕಿ
ನಲಿದು ಕುಣಿತು ಮೆರೆವರಲ್ಲಾ

ಅಮೇರಿಕಾ! ಅಮೇರಿಕಾ!
ಕಲಿಯುಗದ ಕುಬೇರಿಕಾ!

ನಾನು ಏನು ತಪ್ಪುಗೈದೆ?
ಅವರು ಮಾತ್ರ ಒಪ್ಪವೇಕೆ?
ನಾನು ಇಲ್ಲೇ ತಿಷ್ಠತಿ!
ಎಂದಿಗೆ ನಗುತ್ತಿಷ್ಠತಿ?

ಅಮೇರಿಕಾ! ಅಮೇರಿಕಾ!
ಕಲಿಯುಗದ ಕುಬೇರಿಕಾ!

— ಕಾಮತ್.

---

ವಾಜಿಯು ಸಂಧಾನಕ್ಕೆ ಬಂದಿದ್ದ ಅಫಜಲ್‌ಖಾನನನ್ನು ಆಲಿಂಗನವಾಡುವ ನೆಪದಲ್ಲಿ ಸಮಾಪ್ತಿಗೊಳಿಸಿದ ಎಂದು ಅನೃತವನ್ನಾಡಿದ ಪಾಪಕ್ಕೆ, ಉಪವಾಸದ ಪ್ರಾಯಶ್ಚಿತ್ತವನ್ನು ಅಹಮದಾಬಾದಿನಲ್ಲಿ ಮೊರಾರ್ಜಿಯವರು ಆಚರಿಸುತ್ತಿದ್ದಾರೆ ಎಂದು ಮಹಾರಾಷ್ಟ್ರೀಯರು ನಮಗೆ ಬರೆದಿದ್ದಾರೆ.

* * *

ಹೊಸದಾಗಿ ತಮಿಳನ್ನು ಕಲಿತ ಕನ್ನಡಿಗನೊಬ್ಬನು—"ಏನನ್ಯಾಯ ತಮಿಳರಿಗೆ ತಮಿಳನ್ನು ಅರ್ಥವಾಗುವಂತೆ ಮಾತನಾಡಲೂ ಬರುವುದಿಲ್ಲ" ಎಂದನೆಂಬುದು ಇನ್ನೂ ಖಚಿತವಲ್ಲವಂತೆ.

* * *

ಕಾಲು ಕೆರೆದು ಜಗಳಕ್ಕೆ ಬರೋರು ಇನ್ನುಮೇಲೆ ಕಾಲು ಚೀಲ ಧರಿಸುವುದು ಕ್ಷೇಮ!!

—ಈ ಸೊಳ್ಳೆಮಯ ರಾಜಕಾರ್ಯದಾನಿಯಲ್ಲಿ!!

* * *

# ನವ್ಯ ಸಂಗೀತ

(ಒಂದು ಭಾಷಣದಿಂದ)

---

ಸಿಂಬಾಳಿಸಂ, ನವ್ಯಕಾವ್ಯ, ಅಶ್ಲೀಲ ಕಾದಂಬರಿ, ವೇಶ್ಯಾ ವಿಚಾರ, ಪದ್ಧತಿ ಮುಂತಾದ ಕ್ರಾಂತಿಕಾರಕ ಚಳುವಳಿಗಳಿಂದ ಸಾಹಿತ್ಯ ಕ್ಷೇತ್ರದಲ್ಲಿ ಉತ್ತಮ ಪ್ರಗತಿಯನ್ನು ನಾವು ಸಾಧಿಸಿದ್ದಾಗಿದೆ. ಹಿರಿಯ ಕವಿಗಳೆನಿಸಿ ಮೆರೆದಿದ್ದ ಪಂಪ ರನ್ನ ಹರಿಹರ ಕುಮಾರ ವ್ಯಾಸಾದಿಗಳು, ಜನಮನಕ್ಕೆ ಗಾಂಜಾ ತಿನ್ನಿಸಿ, ಪಂಡಿತರಿಗೆ ಪಿತ್ತ ಹಿಡಿಸಿ, ಪಾದಷಾಹಿ ಬಂಡವಾಳಷಾಹೀ ಮೋಹಕ್ಕೆ ಬಿದ್ದ ಸನಾತನಿಗಳೆಂದು ದೂರಿದ್ದಾಗಿದೆ. ಪ್ರತಿ ಪದಾರ್ಥ ಮಾಡಿಕೊಳ್ಳದೆ, ಅಲಂಕಾರ ಶಾಸ್ತ್ರದ ಅರಿವಿಲ್ಲದೆ, ಶಬ್ದಮಣಿ ದರ್ಪಣದ ವ್ಯಾಸಂಗ ಪೂರೈಸದೆ, ಕವಿ ಸಮಯ ಚಾತುರ್ಯವನ್ನು ಕಲಿಯದೆ ಅವರ ಕಾವ್ಯಗಳು ಯಾವುವೂ ನೇಗಿಲಯೋಗಿಗೆ ತಿಳಿಯಲಸಾಧ್ಯವಾದ್ದರಿಂದ, ಆಂಗ್ಲ ಸಾಹಿತ್ಯದ ಅಣುಸ್ಫೋಟನಾಶಾಸ್ತ್ರ ಆಧುನಿಕ ಬಯಾಲಜಿಯ ಅರಿವಿಲ್ಲದೆ ಮಾನಸಿಕ ರೋಗ ಶಾಸ್ತ್ರ ಮನದಟ್ಟಾಗದೆ, ಬಿಡಿಸಲಸದಳವಾದ ಕಾಮುಗಳನ್ನು ಬರೆದು ಅಚ್ಚುಮಾಡಿ, ಜನತೆಯ ಮುಂದಿಡುವ ಮಹಾಕಾರ್ಯ ನಡೆದಿದೆ.

ಆದರೆ, ಸಂಗೀತ? ಸಾಹಿತ್ಯಕ್ಕೂ ಸಂಗೀತಕ್ಕೂ ನಿಕಟ ಸಂಬಂಧವಿದೆ. ಒಂದು ನ್ಯೂಮೋನಿಯಾ ಆದರೆ ಮತ್ತೊಂದು ನರಳುವಿಕೆ. ಒಂದು ನೆಗಡಿಯಾದರೆ, ಮತ್ತೊಂದು ಸಿಂಬಳಿಸಂ. ಅವೆರಡೂ ಏಕ ದೇಹದ ಭಿನ್ನ ಅವಯವಗಳು. ಹಾಲು ನೀರುಗಳಂತೆ, ಅವೆರಡನ್ನೂ ಅನಾಯಾಸವಾಗಿ ಬೆರಸಬಹುದು. ಏಕೆ? ಅಪ್ಪಟ ಹಾಲಿನಲ್ಲಿ ಅರ್ಧ ಮುಕ್ಕಾಲುಭಾಗ ನೀರೇ! ಒಂದು ಕಾಮಿನಿ ಆದರೆ, ಮತ್ತೊಂದು ಅದಕ್ಕೆ ಮೆರುಗು ಕೊಡುವ, ಅದು ಸದಾ ಬಯಸುವ ಕಾಂಡನ.

ಆದ್ದರಿಂದ, ಸಂಗೀತವನ್ನೂ ಬೀದಿಗೆಳೆದು, ಹೊಲಗದ್ದೆಗಳಿಗೆ ನೂಕಿ, ಗುಡಿಸಲುಗಳಲ್ಲಿ ಅಡಕ ಮಾಡಿ, ದೀನ ದಲಿತಕರ್ಷಕ ಶ್ರಮಜೀವಿಗಳ ನಾಲಿಗೆಗಳ ಮೇಲೆ ನಲಿದಾಡಿಸಬೇಡವೆ? ನವ್ಯಕವಿಗಳು ಜನಪದಗೀತೆಗಳನ್ನು ಜನತಾ ರೈಲುಗಳಲ್ಲಿ ಹಾಡಬೇಡವೆ? ಚೆನ್ನಾಗಿ ಊಟ ಮಾಡಿ, ಬಿಸಿ ಬಿಸಿ ಹಾಲು ಕುಡಿದು, ತೊಡೆ ತಟ್ಟುತ್ತಾ ಹಾಡುವ ಗಾಯಕರ ಗಂಟಲಿಂದ ನವಯುಗದ ಹಾಡುಗಳು ಹೊರಬರುವುದು ಅಸಾಧ್ಯ. ಅವುಗಳಿಂದ ಹಸಿದ ಜನಾಂಗಕ್ಕೆ, ಹಾಲ ರುಚಿಯನ್ನರಿಯದ ಜನಸ್ತೋಮಕ್ಕೆ ಹೇಗೆತಾನೆ ಉತ್ಸಾಹ ಬಂದೀತು?

ತ್ಯಾಗರಾಜಾದಿಗಳ ಹಾಡುಗಳೆಲ್ಲವೂ, ರಷ್ಯಾ ನಾಯಕರೊಪ್ಪದ ದೇವರ ಸ್ತುತಿಗಳು. ಅವುಗಳನ್ನು ಹಾಡುವುದರಿಂದ ಕೇಳುವುದರಿಂದ, ಅಯೋಧ್ಯಾ ರಾಜನ ಮೇಲಿನ ಅಭಿಮಾನ ಹೆಚ್ಚುವುದಿಲ್ಲವೆ? ಗಣರಾಷ್ಟ್ರಕ್ಕೆ, ನಾಳಿನ ನವ್ಯ ಭವ್ಯ ಭಾರತಕ್ಕೆ ಅಂಥ ಮನೋಭಾವ ಸಹಕಾರಿಯೆ? ನವೆಂಬರ್ ಒಂದನೆ ತಾರೀಖಿನೊಳಗಾಗಿಯಾದರೂ, ಹೊಸ ಬಗೆಯ ಹಸಿ ಹಸಿಯ ಹಾಡುಗಳು ಸಿದ್ಧವಾಗಬೇಡವೆ?

ಸರಿಗಮಪದನಿ ಎಂಬ ಸ್ಲೋಗನ್‌ನ ಆಧಾರದ ಮೇಲೆ ರಚಿತವಾಗಿರುವ ನಮ್ಮ ಸಂಗೀತ, ನವೀನ ಕಾಲಕ್ಕೆ ಏನೇನೂ ಸಾಲದು. ಅದರ ಆದರ್ಶ ಆಶಯಗಳನ್ನು ನೆರವೇರಿಸಲು ಅರ್ಥಪೂರಿತವಾದ, ವಿಪ್ಲವಕಾರಿಯಾದ, ಕ್ರಾಂತಿಭೂತವಾದ ಮತ್ತೊಂದು ಸಪ್ತಸ್ವರ ನಮಗೆ ಬೇಕಾಗಿದೆ. ಸರಿಗಮಪದನಿ ಸುಪ್ತಸ್ವರವಾಗಿ ಬಿಟ್ಟಿದೆ; ಗುಪ್ತಸ್ವರವಾಗಿದೆ ಎಂದರೂ ತಪ್ಪಾಗಲಾರದು........ನೇಗಿಲಯೋಗಿಗೆ ಜಯವಾಗಲಿ ಎಂಬ ಏಕಾದಶಸ್ವರವೇ ಈ ಏಕಾದಶಿ ಯುಗಕ್ಕೆ ಸಮಂಜಸ.

ಆಮೇಲೆ, ಗಾಯಕರ ಶಾರೀರ. ಮಧುರ ಕಂಠದಿಂದ ಮನುಷ್ಯರನ್ನು ಮುಗ್ಧಗೊಳಿಸುವ ಮಾಟ ನಮಗಿನ್ನು ಸಾಕು. ಮಾಧುರ್ಯ ಎಂಬುದು ಒಂದು ಅಲಂಕಾರ; ಅಲಂಕಾರ, ಬರೀ ಬೂಷ್ವಾರ್ವ್ಯಾಮೋಹ, ನಿರಾಡಂಬರವೇ ನಮ್ಮ ಗುರಿ. ಕರ್ಷಕನಿಗೂ ಶ್ರಮಜೀವಿಗೂ, ಅಲಂಕಾರವೇತಕೆ? ಹಸಿದ ಹೊಟ್ಟೆ ಚಂದನ ಲೇಪನ ಬಯಸುವುದಿಲ್ಲ ...ಶ್ರೋತೃಗಳನ್ನು ಕೆರಳಿಸುವ, ಅವರನ್ನು ಸದಾ ಜಾಗೃತರಾಗಿರಿಸುವ ನವಯುಗದ ನವ್ಯ ಗಾಯನಕ್ಕೆ ಬೇಕಾದ್ದು ಬಿಚ್ಚುನಾಲಿಗೆ, ಚುಚ್ಚುಕಂಠ.

— ಶ್ರೀಕಂಠಪ್ಪ.

---

ಬೆಂಗಳೂರಿನಲ್ಲಿ ೧೮,೦೦೦ ಜನ ಹುಚ್ಚರು ಓಡಾಡುತ್ತಿದ್ದಾರೆ ಎಂದು ವರದಿ.

—ಅದಕ್ಕೇ ಇರಬೇಕು ೪'×೬' ಕೊಠಡಿ ಬಾಡಿಗೆಗೆ ಬೇಕು ಎಂದರೆ ಹದಿನೈದು ಕೊಡು ತಿಂಗಳಿಗೆ ಅಂತ ಮಾಲೀಕರು ಕೇಳುತ್ತಿರುವುದು. ಹುಚ್ಚರು ಕೊಟ್ಟೇಬಿಡ್ತಾರೆ ಅಂತ!!

* * *

ಸಿಗರೇಟು ಸೇದಿದರೆ ರಣಹುಣ್ಣು ಬರುತ್ತದೆಂದು ಸಿದ್ಧಾಂತವಂತೆ.

—ಬಂದಾಗ ಬರಲಿ ಸಧ್ಯ! ಈಗ ಮನೆಯಲ್ಲಿ ಗಂಡಸು ಶಾಂತವಾಗಿರಲಿ ಎಂದು ಮಹಿಳಾ ಸಮ್ಮೇಳನವು ನಿರ್ಣಯ ಮಾಡಿರುವುದು ಸುಳ್ಳಂತೆ.

* * *



ನನ್ನ ಫೋಟೋ ಈ ಪತ್ರಿಕೆಯಲ್ಲಿ ಬಂದಿದೇರ್ರೀ! ಅದಕ್ಕೇ ಎಲ್ಲವನ್ನೂ ಕೊಂಡು, ನನ್ನ ದಾಯಾದಿಗಳಿಗೆಲ್ಲಾ ಒಂದೊಂದು ಪ್ರತಿ ಉಚಿತ ಕಳಿಸುತ್ತೇನೆ!!

*　　　*　　　*

ಈಗ, ಭಾರತದಲ್ಲಿ ಎಲ್ಲಿ ಯಾರು ದರೋಡೆ ಖೂನಿ ಮಾಡಲಿ, ಬೇಗ ನಾಗಾ ಪ್ರಾಂತ್ಯಕ್ಕೆ ವಲಸೆ ಹೋಗಿ, ರಕ್ಷಣೆ ಪಡೆಯುತ್ತಿದ್ದಾರೆ ಎಂಬುದು ಖಚಿತವಲ್ಲವಂತೆ.

—ಅವರುಗಳಿಗೆ ಶುಭ್ರ ಸ್ಥಾನದಲ್ಲೂ ಆಸರೆ ಇದೆಯಲ್ಲವೇ!










**ಷಾಲಿಮಾರ್** ವುಡ್‌ಕೋಟ್

**ರೆಡಿಮಿಕ್ಸ್ಡ್ ಪೆಯಿಂಟ್**

ಒಳ್ಳೆ ಹೊಳಪಿರುವ, ಬಹಳ ಬಾಳಿಕೆ ಯುಳ್ಳ ರೆಡಿಮಿಕ್ಸ್ಡ್ ಬಣ್ಣ

**ಷಾಲಿಮಾರ್** ಲಸ್ಟ್ರಾಲ್

**ಅಲ್ಯೂಮಿನಿಯಂ ಪೆಯಿಂಟ್**

ವಿಸ್ತಾರ ಮೇಲ್ಮೈ ಪ್ರಸರಣ ಶಕ್ತಿಯುಳ್ಳದ್ದು

**ಷಾಲಿಮಾರ್** ವ್ಯಾಟ್‌ಕೋಟ್

**ಫ್ಲಾಟ್ ವಾಲ್ ಪೆಯಿಂಟ್**

ಒಳಭಾಗದ ಗಾರೆ, ಕಾಂಕ್ರೀಟು, ಮತ್ತು ಮರಕ್ಕೆ ಹಿಡಿಯುವುದು. ಬಾಳಿಕೆವುಳ್ಳದ್ದು.

**ಅತ್ಯುತ್ತಮವಾದ ಸಕಲಕಾರ್ಯಗಳಿಗೂ ಉಪಯೋಗಿಸಬಹುದಾದ ಎನಾಮೆಲ್**

ಅನೇಕ ತರದ ಕೈಗಾರಿಕೆ ಮತ್ತು ಮನೆಕೆಲಸಗಳಿಗೆ ಉಪಯೋಗಕ್ಕೆ ಹೀಳುವುದಲ್ಲದೆ
ಯಾವುದರಮೇಲೂ ಬಳಿಯಬಹುದು. ಬ್ರಷ್ಷಿನಿಂದ ಬಳಿಯಬಹುದು,
ಸ್ಪ್ರೇ ಮಾಡಬಹುದು ಅಥವಾ ಬಣ್ಣದಲ್ಲಿ ಅದ್ದಲೂಬಹುದು;
ಆಗಿಂದಾಗ್ಗೆ ತೊಳೆದರೂ ಬಣ್ಣ ನಿಲ್ಲುವುದು

**ಷಾಲಿಮಾರ್ ಸೂಪರ್‌ಲ್ಯಾಕ್**







**SHALIMAR PAINT, COLOUR & VARNISH CO., LTD.,**
**"Karim Manzil", Kumbargundi Road, Bangalore City-2.**
**Telephone No. 3607**

SPW 326